ಮಿಂಚಿನ ಬಳ್ಳಿಯ ೫ನೆಯ ವರುಷದ ೪ನೆಯ ಕುಡಿ

# ರಾಜ್ಯಾದಾಯವೂ ಬಡತನವೂ




ಮೂಲ ಲೇಖಕ:
ಜೆ. ಸಿ. ಕುಮಾರಪ್ಪ

ಅನುವಾದಕ:
ಡಿ. ಎಸ್. ಶರ್ಮ





ಚಾಲುಕ್ಯ ವಿಕ್ರಮ ವರುಷ ೮೬೭
ಕಾಮನ ಹುಣ್ಣಿವೆ

ಮಾರ್ಚ ೧೯೪೩ ★ ಬೆಲೆ: ೧-೪-೦



ಮಿಂಚಿನ ಬಳ್ಳಿಯ ೬ನೆಯ ವರುಷದ ೧ನೆಯ ಕುಡಿಯು

# ರಶಿಯದ ರಾಜ್ಯಕ್ರಾಂತಿ

ಬರೆದವರು:

ಪಿ. ವೆಂಕಟರಮಣಾಚಾರ

೧೯೪೩ನೆಯ ಎಪ್ರಿಲದಲ್ಲಿ
ಪ್ರಕಟವಾಗುವುದು



: : : : ಮಿಂಚಿನ ಬಳ್ಳಿ, ಧಾರವಾಡ



ಪ್ರಕಾಶಕರು:
ಬಿ. ಜಿ. ಅವಧಾನಿ
ಮಿಂಚಿನ ಬಳ್ಳಿಯ ಚಾವಡಿ
ಧಾರವಾಡ

ಮುದ್ರಕರು:
ಕೆ. ಜಿ. ರಾಯದುರ್ಗ
ಮೋಹನ ಮುದ್ರಣಾಲಯ,
ಧಾರವಾಡ



ಮಾರ್ಚ ೧೯೪೩

# ಪ್ರಕಾಶಕರ ಬಿನ್ನಹ

ಮಿಂಚಿನ ಬಳ್ಳಿಯ ೫ನೆಯ ವರ್ಷದ ೬ನೆಯ ಕುಡಿ '**ರಾಜ್ಯಾದಾಯವೂ, ಬಡತನವೂ**' ಈಗ ಚಂದಾದಾರರ ಕೈಸೇರುತ್ತಲಿದೆ. ಇದು ಇಷ್ಟರಲ್ಲಿಯೇ ಪ್ರಕಟವಾಗಬೇಕಿತ್ತು. ಹಲವಾರು ತೊಂದರೆಗಳಿಂದ ಪ್ರಕಟವಾಗಲು ತಡವಾಯಿತು. ಕಾರಣ ವಾಚಕರು ಕ್ಷಮಿಸಬೇಕು.

ಮಿಂಚಿನ ಬಳ್ಳಿಯು ೫ ವರುಷಗಳಲ್ಲಿ ೨೨ ಪುಸ್ತಕಗಳನ್ನು ಪ್ರಕಟಿಸಿ, ಜನಾದರಣೆಯನ್ನು ಪಡೆದಿದೆಯೆಂದು ಭಾವಿಸಿದ್ದೇವೆ. ಜಗತ್ತಿನ ಪರಿಸ್ಥಿತಿಯೇ ಭೀಕರವಾಗುತ್ತಿದೆ. ಆದರೂ ಇಂಥ ವಿಷಮ ಸ್ಥಿತಿಯಲ್ಲಿಯೂ ಮುಂದಿನ ವರುಷದ ನಾಲ್ಕು ಪುಸ್ತಕಗಳನ್ನು ಪ್ರಕಟಿಸುವೆವೆಂದು ವಾಚಕರಿಗೆ ಭರವಸೆ ಕೊಡುತ್ತೇವೆ. ಕಾರಣ ಚಂದಾದಾರರು ಎಂದಿನಂತೆ ನಮ್ಮ ಬಳ್ಳಿಯನ್ನು ಬರಮಾಡಿಕೊಳ್ಳಬೇಕೆಂದು ಬಿನ್ನಹ.

ಶ್ರೀ. ಜೆ. ಸಿ. ಕುಮಾರಪ್ಪನವರು ಮಹಾತ್ಮಾ ಗಾಂಧಿಯವರ ಶಿಷ್ಯರು. ಪ್ರಸಿದ್ಧ ಅರ್ಥಿಕ ತಜ್ಞರು. ಅವರು ಇಂಗ್ಲಿಷಿನಲ್ಲಿ Public finance & our poverty ಎಂಬ ಪುಸ್ತಕ ಬರೆದಿದ್ದಾರೆ. ಅದನ್ನು ಶ್ರೀ. ಡಿ. ಎಸ್. ಶರ್ಮರು ಕನ್ನಡಿಸಿ, ನಮ್ಮ ಬಳ್ಳಿಯಲ್ಲಿ ಪ್ರಕಟಿಸಲು ಅನುಮತಿ ಕೊಟ್ಟಿದ್ದಾರೆ. ಅದಕ್ಕೆ ನಾವು ಅವರಿಗೆ ಕೃತಜ್ಞರಾಗಿದ್ದೇವೆ.

ಜಗದ್ವಂದ್ಯರಾದ ಮಹಾತ್ಮಾ ಗಾಂಧಿಯವರು ಇದಕ್ಕೆ ಚಿಕ್ಕ ಮುನ್ನುಡಿಯ ಆಶೀರ್ವಾದ ಮಾಡಿದ್ದಾರೆ. ಭರತಖಂಡದ ಆರ್ಥಿಕ ಪರಿಸ್ಥಿತಿಗೆ ಸಹಾಯವಾಗಿರುವ ರಾಜ್ಯದ ರೀತಿ ನೀತಿಗಳನ್ನು ಇಲ್ಲಿ ಚರ್ಚಿಸಲಾಗಿದೆ. ಇದರಲ್ಲಿ ಅಡಕವಾಗಿರುವ ವಿಷಯಗಳೆಲ್ಲವೂ ಪ್ರತಿಯೊಬ್ಬ ಭಾರತೀಯನಿಗೆ ತಿಳಿಯುವದು ಅಗತ್ಯವಿದೆ. ಆದರೆ ನಮ್ಮ ವಿಚಾರಶಕ್ತಿಯು ಬಲಗೊಂಡು, ವಸ್ತುಸ್ಥಿತಿಯ ನಿದರ್ಶನದಿಂದ ನಿವಾರಿಸುವ ಕಾರ್ಯವನ್ನು ಕೈಕೊಳ್ಳಲು ಅನುವಾಗುವದು.

ಇಂಥ ಪುಸ್ತಕಗಳು ಕನ್ನಡದಲ್ಲಿ ಪ್ರಕಟವಾಗಿಲ್ಲ. ಅನೇಕಾನೇಕ ಬಗೆಯಿಂದ ಇಂಥ ಪುಸ್ತಕಗಳ ಅವಶ್ಯಕತೆ ಕನ್ನಡ ಸಾಹಿತ್ಯಕ್ಕಿದೆ. ವಾಚಕರು ಇದನ್ನು ಗಮನಿಸಿ ಇದರ ಉಪಯುಕ್ತತೆಯನ್ನು ಕಂಡುಕೊಳ್ಳುವರೆಂದು ಆಶಿಸಿದ್ದೇವೆ.

**—ಪ್ರಕಾಶಕರು**

# ನನ್ನ ಮಾತು

ಮೂಲ ಗ್ರಂಥವು ಇಂಗ್ಲಿಷಿನಲ್ಲಿದೆ. ಇಂಗ್ಲಿಷು ಬಾರದ ಕನ್ನಡಿಗರೆಲ್ಲರೂ ಈ ಪುಟ್ಟ ಪುಸ್ತಕವನ್ನು ಆಗತ್ಯವಾಗಿ ಓದ ಬೇಕು—ಎಂಬ ಉದ್ದಿಶ್ಯವಾಗಿ ನಾನು ಮೂಲಗ್ರಂಥದ ಭಾವಕ್ಕನುಸಾರವಾಗಿ ಕನ್ನಡಕ್ಕೆ ಸ್ವೇಚ್ಛಾನುವಾದ ಮಾಡಿ ಕನ್ನಡಿಗರಿಗೆ ನೀಡಿದ್ದೇನೆ.

ಜನಜೀವನದಲ್ಲಿ ನಮಗೆ ಬಂದಿರುವ ಸ್ಥಿತಿ-ಗತಿಗಳನ್ನೂ ಘಟನೆಗಳನ್ನೂ ನಾವು ಅರಿಯದೆಯೇ ಅನುಭವಿಸುತ್ತಿರುವೆವು. ನಮ್ಮ ಜೀವನವು ಪ್ರಭುತ್ವದ ರೀತಿ-ನೀತಿಗಳಿಂದ ಹೇಗೆ ರೂಪುಗೊಂಡು ನಮ್ಮನ್ನು ಹೇಗೆ ಈ ಪ್ರಸ್ತುತ ದಾರಿದ್ರ್ಯಸ್ಥಿತಿಯಲ್ಲಿ ಇರಿಸಿದೆಯೆಂಬುದರ ಅರಿವನ್ನು ಈ ಪುಸ್ತಕವು ನಮಗೆ ಬಿಚ್ಚಿ ತೋರಿಸುವುದು. ಇದನ್ನು ಮನನ ಮಾಡಿಕೊಂಡು ಕನ್ನಡರೆಲ್ಲರೂ ಇದರ ಉಪಯುಕ್ತತೆಯನ್ನು ಕಂಡುಕೊಂಡರೆ ನಾನು ಪಟ್ಟ ಶ್ರಮವು ಸಾರ್ಥಕವಾಗುವುದೆಂದು ಭಾವಿಸುತ್ತೇನೆ.

—ಡಿ. ಎಸ್. ಶರ್ಮ

# ಮುನ್ನುಡಿ

## ಮಹಾತ್ಮಾ ಗಾಂಧಿಯವರಿಂದ

ಈ ಪುಸ್ತಕ ಬರೆದವರು ಶ್ರೀ. ಆಚಾರ್ಯ ಕುಮಾರಪ್ಪನವರು. ಇದು ಈ ಮೊದಲು "ಯಂಗ್ ಇಂಡಿಯಾ" ಪತ್ರಿಕೆಯಲ್ಲಿ ಪ್ರಕಟವಾಯಿತು. ಗ್ರಂಥಕರ್ತರಿಂದ ಅಗತ್ಯ ಕಂಡುಬಂದಲ್ಲಿ ಮತ್ತೆ ಪರಿಶೋಧಿಸಲ್ಪಟ್ಟಿತು. ಈಗ ಪುಸ್ತಕ ರೂಪವಾಗಿ ಪುನರ್ಮುದ್ರಣವಾಗಿದೆ. ಇದು ಆಂಗ್ಲೇಯ ಪ್ರಭುತ್ವದ ಆರ್ಥಿಕ ನೀತಿಯನ್ನು ವಿಮರ್ಶಿಸುತ್ತಿರುವುದಲ್ಲದೆ, ಅದರಿಂದ ಪ್ರಜಾಕೋಟಿಯ ಮೇಲಾಗುವ ಪರಿಣಾಮವನ್ನೂ ಪರೀಕ್ಷಿಸುತ್ತಿದೆ. ಆದುದರಿಂದ ಇದು ಬಹಳ ಸಮಯೋಚಿತವಾಗಿರುವುದು. ಈ ಅಧ್ಯಾಯಗಳ ಉಪಯುಕ್ತತೆಯು, ಗ್ರಂಥಕರ್ತರಿಂದಲೇ ಸಿದ್ಧಗೊಳಿಸಲ್ಪಟ್ಟಿರುವ ಅನುಕ್ರಮಣಿಕೆಯೊಂದಿಗೆ ಇರುವುದರಿಂದ ವಿಶೇಷತೆಯನ್ನು ಪಡೆದಿದೆ. ಈ ಪುಟ್ಟ ಪುಸ್ತಕವನ್ನು ನಾನು ಭಾರತೀಯ ಹಾಗು ಪಾಶ್ಚಿಮಾತ್ಯ ವಾಚಕರೆಲ್ಲರಿಗೂ ಓದಿ ತಿಳಿದುಕೊಳ್ಳಲು ಅವಶ್ಯವಾದುದೆಂದು ಕೊಂಡಾಡಿ ಹೇಳುತ್ತೇನೆ.

**—ಮೋಹನದಾಸ ಕರಮಚಂದ ಗಾಂಧಿ**

**ಕರಾಚಿ,** ೨೮-೬-೧೯೩೦

# ಮೂಲ ಲೇಖಕರ ಮಾತು

ಭಾರತದ ಬಡತನಕ್ಕೆ ಕಾರಣಗಳೇನೆಂಬುದನ್ನು ಕುರಿತು ವಿಚಾರಿಸು ವುದಕ್ಕೆ ಇಲ್ಲವೆ ಅದಕ್ಕೆ ಹೊಣೆ ಯಾರೆಂಬುದನ್ನು ನಿರ್ಧರಿಸುವುದಕ್ಕೆ ನಾನು ಪ್ರಯತ್ನಿಸುತ್ತಿಲ್ಲವೆಂದು ಮೊದಲೇ ಹೇಳಬಯಸುತ್ತೇನೆ. ಈ ಉಪನ್ಯಾಸವು ಈಗಿನ ಅತ್ಯಂತ ಅನ್ಯಾಯವಾದ ಆರ್ಥಿಕ ನೀತಿಗಳನ್ನು ಸೂಚಿಸುವುದರಿಂದ, ಮುಂದೆ ಉತ್ತಮ ಫಲವು ಉಂಟಾಗಬಹುದೆಂಬ ಆಶೆಯಿಂದ ಮಾಡಿದ ಪ್ರಯತ್ನ. ಆದುದರಿಂದ ದೇಶವನ್ನು ಬಡತನಕ್ಕೀಡುಮಾಡಿರುವ ಪರಿಸ್ಥಿತಿಗಳೆಲ್ಲವನ್ನೂ ನಾನು ಪರಿಶೀಲಿಸಬೇಕಾಗಿಲ್ಲ. ಪುರಾತನ ಭರತಖಂಡದ ಸಂಪತ್ಸಮೃದ್ಧಿ ವೈಭವಯುತವಾದ ಪುಣ್ಯಭೂಮಿಯಲ್ಲಿಯೇ ಇಂದು ನೆಲೆಸಿರುವ ಭಯಂಕರ ದಾರಿದ್ರ್ಯಕ್ಕೆ ದೇಶವನ್ನು ಸೆಳೆದಿರುವ ಆರ್ಥಿಕ ರೀತಿಯ ಪ್ರವಾಹವು ಎಷ್ಟೇ ಆಕರ್ಷಣೀಯವಾಗಿದ್ದರೂ ನನಗೆ ಅದರ ಗೊಡವೆ ಬೇಕಿಲ್ಲ. ದೇಶದ ಸ್ಥಿತಿಗತಿಗಳಲ್ಲಿ ವ್ಯತ್ಯಾಸವನ್ನು ತಂದಿರುವ ಅನೇಕ ಸಂದರ್ಭಗಳು ಎಷ್ಟು ಚಿತ್ತಾಕರ್ಷಕವಾಗಿದ್ದರೂ ಈ ಪುಟ್ಟ ಪುಸ್ತಕದಲ್ಲಿ ಆ ಮೋಹಜಾಲದಲ್ಲಿ ಬೀಳುವ ವಿಷಯಗಳೆಲ್ಲವನ್ನೂ ವಿಮರ್ಶೆ ಮಾಡಲು ಅವಕಾಶಕೊಟ್ಟಿಲ್ಲ. ಆದುದರಿಂದ ರಾಜ್ಯಾದಾಯವೆಂಬ ಒಂದೇ ಒಂದು ವಿಚಾರವನ್ನು ಕುರಿತು ವಿಮರ್ಶಿಸುವದಕ್ಕೆ ಮಾತ್ರ ನನ್ನ ಮಿತಿಯನ್ನು ಏರ್ಪಡಿಸಿಕೊಂಡಿರುವೆನು.

ಈ ಪರಿಮಿತ ಕ್ಷೇತ್ರದಲ್ಲಿಯೂ ಸಹ ಬಹಳ ಹಿಂದಿನ ಕಾಲದ ವಿಚಾರದ ಗೊಡವೆಗೆ ಹೋಗುವಂತಿಲ್ಲ. ಆದರೆ ಈಗಿನ ಕಾಲಕ್ಕೊಂದು ಶತಮಾನದ ಹಿಂದೆ ನಡೆದಿರುವ ಆಡಳಿತದ ರೀತಿನೀತಿಗಳನ್ನು ಮಾತ್ರ ವಿಮರ್ಶಿಸಬೇಕಾಗಿದೆ ಈ ವಿಮರ್ಶೆಯಲ್ಲಿ ಐತಿಹಾಸಿಕ ದೃಷ್ಟಿಯಿಂದ ಹಳೆಯವಾದ ಕೆಲವು ಸಾಕ್ಷಿ ಸಾಹಿತ್ಯಗಳನ್ನು ಪರಿಶೀಲಿಸಬೇಕಾಗಿದೆ. ಆದರೆ ಸುಮ್ಮನೆ ಈಗಿನ ಕಾಲದ ರೀತಿ ನೀತಿಗಳನ್ನು ಮಾತ್ರ ವಿಚಾರಿಸುತ್ತಿಲ್ಲವೆಂಬುದನ್ನು ನಾವು ನೆನಪಿನಲ್ಲಿಡಬೇಕು. ಅಷ್ಟೇ ಅಲ್ಲದೆ ಪ್ರಜಾಕೋಟಿಯ ಆರ್ಥಿಕ ಜೀವನ ಸ್ಥಿತಿಯ ಮೇಲೆ ಅಳಿಸಲಾರದಂತಹ ಗುರುತುಗಳನ್ನೂ ಏರ್ಪಡಿಸಿರುವ ಪುರಾತನ ಪದ್ಧತಿಗಳನ್ನೂ ಪರಿಶೀಲಿಸಬೇಕಾಗಿದೆ.

ಪ್ರಭುತ್ವದ ಆರ್ಥಿಕ ಸಚಿವರು ತನ್ನ ಉಜ್ವಲ ಭಾಷಣಗಳಲ್ಲಿ ಸಮರ್ಥಿಸಿರುವ ಕಾರಣಗಳನ್ನು ವಿಮರ್ಶಿಸದೆ ಆ ವಿಚಾರದಲ್ಲಿ ನಡೆದಿರುವ ಕಾರ

ಗಳನ್ನೂ ಅವುಗಳ ಪರಿಣಾಮಗಳನ್ನೂ ಹಿಡಿದು ನಾನು ನನ್ನ ಈ ತೀರ್ಮಾನಗಳಿಗೆ ಬಂದಿರುವೆನು. ಏಕೆಂದರೆ, ಇಂದಿನ ವಿಚಾರಗಳನ್ನು ಕುರಿತು ವಿಪುಲವಾಗಿ ವಿವರಿಸುವದನ್ನು ತಡೆದು, ಹಿಂದಿನ ಕಾಲದಲ್ಲಿ ಪ್ರಯುಕ್ತ ಮಾಡಿರುವ ಅನುಭವ ತತ್ವಗಳನ್ನು ಪರಿಶೀಲಿಸುವುದನ್ನೇ ನಾನು ಹೆಚ್ಚಿಗೆ ತೆಗೆದುಕೊಂಡಿರುವೆನು. ಉದಾಹರಣೆಗಾಗಿ ಹತ್ತಿಯ ಮೇಲೆ ವಿಧಿಸಿರುವ ತೆರಿಗೆಯನ್ನು ತೆಗೆದುಕೊಳ್ಳಬಹುದು. ಇಂತಹ ವಿಷಯಗಳಲ್ಲಿ ಆಚರಣೆಯಲ್ಲಿರುವ ಪದ್ಧತಿಗಳ ಮೇಲೆ ಆಧಾರ ಪಡದೆ, ನಡೆದುಬಂದಿರುವ ಕೆಲಸದ ಆಧಾರದ ಮೇಲೆಯೆ ಮುಂದುವರಿಯಬೇಕಾಗಿದೆ. ಯಾವ ತೆರಿಗೆಯಾಗಲಿ, ಶ್ರೇಷ್ಠವಾಗಲಿ ಉತ್ತಮ ರೀತಿಯದಾಗಿರುವುದೆಂದು ಹೇಳುವುದರಲ್ಲೇನೂ ಲಾಭವಿಲ್ಲ. ನಾವು ನೋಡಬೇಕಾದುದು ಅದಲ್ಲದೆ ಆ ಪದ್ಧತಿಯ ಸ್ಥಾನದಲ್ಲಿ ಬೇರೊಂದಿದ್ದಾಗ ಏನಾಗಿರುತ್ತಿದ್ದಿತೆಂದು. ಎಷ್ಟೋ ಅತ್ಯವಶ್ಯಕವಾಗಿ ಅವಸರವಿರುವ ಕೆಲಸಗಳಿರುವಾಗ, ರಾಜ್ಯಾದಾಯವನ್ನು ಅಷ್ಟು ಅಗತ್ಯವಿಲ್ಲದ ಕಾರ್ಯಗಳಿಗೆ ಉಪಯೋಗಿಸಿದರೆ, ಅವೆಷ್ಟೋ ಮುಖ್ಯವಾಗಿದ್ದರೂ ಲಾಭಕರವಾಗಿದ್ದರೂ ಅದು ತಪ್ಪು ಹಾದಿಯಲ್ಲಿಯೇ ಉಪಯೋಗಿಸಲ್ಪಟ್ಟಿರುವುದು. ಮಕ್ಕಳು ಹಸಿವಿನಿಂದ ಸಾಯುತ್ತಿರುವಾಗ ಆಹಾರವೂ, ಆ ಆಹಾರವನ್ನು ಪಡೆಯುವ ವಿಧಾನವೂ, ಮುಖ್ಯವಾದುವು. ಅವಿದ್ಯಾವಂತರ ದೇಶದಲ್ಲಿ ವಿಶ್ವವಿದ್ಯಾನಿಲಯದ ವ್ಯವಸ್ಥೆಗಿಂತಲೂ ಸಾರ್ವಜನಿಕರಿಗೆ ಓದುಬರೆಹವು ಮುಖ್ಯವಾದುದು. ಆಹಾರಕ್ಕೇ ಅಭಾವವಿದ್ದಾಗ ರೈಲ್ವೆ ಮಾರ್ಗಗಳನ್ನೂ ಉತ್ತಮ ರಸ್ತೆಗಳನ್ನೂ ಸ್ಥಾಪಿಸಿರುವೆನೆಂದು ಹೆಮ್ಮೆಪಡುವುದು ವ್ಯರ್ಥವಾದುದು. ಇವು ಯಾವುದಕ್ಕೆ ಪ್ರತಿಯಾಗಿ ಏರ್ಪಡಿಸಲ್ಪಟ್ಟಿರುವವೋ, ಇವು ಯಾವುದಕ್ಕೆ ಉಪಯೋಗಿಸಲ್ಪಡುತ್ತಿವೆಯೋ, ಇವು ಯಾವ ಪ್ರಜಾವರ್ಗಕ್ಕೆ ಲಾಭಕಾರಿಯಾಗಿವೆಯೋ, ಇದಕ್ಕೆ ಮುಂಚೆ ಇದ್ದ ಪರಿಸ್ಥಿತಿಯು ಯಾವ ಗತಿಗಿಳಿದಿದೆಯೋ, ಇವೆಲ್ಲವನ್ನೂ ಆಲೋಚಿಸಬೇಕಾಗಿದೆ. ಇವು ವಿದೇಶೀಯ ವರ್ತಕನಿಗೆ, ಸುಲಿಗೆಗಾರನಿಗೆ ಅಥವಾ ಸಾಹುಕಾರನಿಗೆ ಲಾಭತರುವಂತಹವಾಗಿದ್ದರೆ, ಇದರಿಂದ ಬಡವನ ಜೀವನವನ್ನೇ ಅಲಕ್ಷ್ಯ ಮಾಡುವಂತಿದ್ದರೆ, ಅದು ಆಡಳಿತ ವಿಧಾನಕ್ಕೇ ಕಳಂಕವನ್ನು ತರುವದೇ ವಿನಾ ನ್ಯಾಯವಾಗಿ ಹೆಮ್ಮೆ ಪಡಲು ಯಾವ ಅವಕಾಶವನ್ನೂ ಕೊಡುವುದಿಲ್ಲ.

ಈ ಪುಟ್ಟ ಪುಸ್ತಕದಲ್ಲಿ ಆಳವಾಗಿ ಚರ್ಚಿಸಲು ಈ ವಿಚಾರವೇ ವಿಶಾಲವಾದುದು. ವಿಮರ್ಶೆಯ ಮುಖ್ಯ ಮಾರ್ಗಗಳನ್ನು ಮಾತ್ರ ಸೂಚಿಸಲಾಗಿದೆ. ಇಲ್ಲಿ ನಾನು ಅನುಸರಿಸಿರುವ ಪದ್ಧತಿಯು, ಬೇಕಾದ ಸಾಕ್ಷಿ ಸಾಹಿತ್ಯವನ್ನು ಒದಗಿಸಿಕೊಡುವುದು. ಈ ವಿಚಾರದಲ್ಲಿ ಉದ್ದಾಮ ಪಂಡಿತರ ಅಭಿಪ್ರಾಯಗಳನ್ನು ಎತ್ತಿ ತಿಳಿಸಿ, ಅವುಗಳಿಂದ ತೀರ್ಮಾನಗಳನ್ನು ಸಮರ್ಥಿಸುವುದು.

ಈ ಉಪನ್ಯಾಸದಲ್ಲಿ ಕೊಟ್ಟಿರುವ ಅಂಕಿಗಳು ೧೯೩೪-೩೫ನೆಯ ಸಾಲಿಗೆ ಸಂಬಂಧಿಸಿರುವುದರಿಂದ ಈಗಿನ (೧೯೩೮) ಅಂಕಿಗಳನ್ನು ತೋರಿಸುವ ಪರಿಶಿಷ್ಟವನ್ನು ಹೊಂದಿಸಿದೆ. ಇದರ ಜತೆಗೆ ಕೊಟ್ಟಿರುವ ಪರಿಶಿಷ್ಟ 'ಅ' ನಾಲ್ಕನೆಯ ಭಾಗವೂ ವಿಚಾರವನ್ನು ವಿಶದೀಕರಿಸಿ ಮನಸ್ಸನ್ನು ಒಪ್ಪಿಸುವುದೆಂದು ನಂಬುತ್ತೇನೆ. ಫ್ರಾನ್ಸವು ಯಾವಾಗಲೂ ಜನಗಣನೆಯಲ್ಲಿ ಏರದೆ, ಕಡಿಮೆ ಪ್ರಜಾಸಂಖ್ಯೆಯದೆಂದು ಪ್ರತೀತಿ. ಕಳೆದ ಹತ್ತು ವರುಷಗಳಲ್ಲಿ ಐವತ್ತು ವರುಷದ ವರೆಗೂ ಬ್ರಿಟಿಷ್ ಹಿಂದುಸ್ತಾನದ ಕ್ಷೇತ್ರಗಳನ್ನು ವಿಸ್ತರಿಸಲಾಗಿದೆಯೆಂದು ಹೇಳಿದಾಗ, ಇದರಲ್ಲಿಯೂ ಹಿಂದೂದೇಶವು ಗಣ್ಯಸ್ಥಾನವನ್ನೇ ಪಡೆದಿದೆಯೆಂಬುದನ್ನು ವಾಚಕರು ಗಮನದಲ್ಲಿಡಲಿ. ಪ್ರಭುತ್ವದ ಪ್ರಮುಖರು ಸಂಜಿಗೆಯ ಕಾರಣವನ್ನು ತೋರಿಸಿದ ಹಾಗೆ ಹಿಂದೂದೇಶದ ದಾರಿದ್ರ್ಯದ ಸಮಸ್ಯಾಪರಿಹಾರವು ಪ್ರಜಾಭಿವೃದ್ಧಿಯ ಅಂಕಿ ಅಂಶಗಳಲ್ಲಿಲ್ಲ.

ನಾನು ನ್ಯೂಯಾರ್ಕಿನಲ್ಲಿ, ಕೊಲಂಬಿಯಾ ವಿಶ್ವವಿದ್ಯಾಲಯದಲ್ಲಿರುವ ಪ್ರೊಫೆಸರ ಇ. ಆರ್ ಎ. ಸೆಲಿಗ್ಮನ್ನರ ವಿದ್ಯಾರ್ಥಿಯಾಗಿದ್ದಾಗ ಈ ಉಪನ್ಯಾಸಕ್ಕೆ ಬೇಕಾದ ವಸ್ತುಸಾಮಗ್ರಿಗಳೆಲ್ಲವನ್ನೂ ಶೇಖರಿಸಿದೆನು. ಅವನ್ನೇ ಸಾಮಾನ್ಯ ವಾಚಕವೃಂದವು ಓದುವಂತೆ ಅನುಕೂಲವಾಗಿ ಜೋಡಿಸಿ 'ಯಂಗ್ ಇಂಡಿಯಾ'ದಲ್ಲಿ ೧೯೨೯ನೆಯ ನವೆಂಬರ, ಡಿಸೆಂಬರ, ೧೯೩೦ನೇ ಜನೆವರಿ ತಿಂಗಳುಗಳಲ್ಲಿ ಕ್ರಮವಾಗಿ ಪ್ರಕಟಿಸಿದೆನು. ಈಗ ಅದು ಪುಸ್ತಕ ರೂಪವಾಗಿಯೂ ಪ್ರಕಟವಾಗಿದೆ.

ಗುಜರಾತು ವಿದ್ಯಾಪೀಠ<br>ಅಹಮದಾಬಾದು

ಜೆ. ಸಿ. ಕುಮಾರಪ್ಪ

# ಅರ್ಪಣೆ

Him who bears the burden and the heat of
the day,

Whose extravagance consists in maintaining the most luxurious Government of the
world,

Whose generosity is in paying his taxes even at the cost of the subsistance of his
wife and children,

And on whose shoulders the greatness of
Great Britain rests,

" Thou shalt not muzzle the ox when he
treadeth out the corn. "

# ವಿಷಯ ಸೂಚಿಕೆ

# ರಾಜ್ಯಾದಾಯವೂ, ಬಡತನವೂ

## ೧. ಉಪಕ್ರಮಣಿಕೆ

ಭರತಖಂಡದ ಅರ್ಥಿಕಶಾಸ್ತ್ರದ ಬೆಳವಣಿಗೆಯ ಪ್ರಾರಂಭ ದೆಶೆಯಲ್ಲಿ, ತೆರಿಗೆಗಳು ರಾಜನು ಪ್ರಜೆಗಳಿಗೆ ಸಲ್ಲಿಸಿದ ಸೇವೆಗೆ ಪ್ರತಿಫಲ ರೂಪವಾಗಿ ಕೊಡಬೇಕಾದುವೆಂದು ಪರಿಗಣಿಸಲ್ಪಟ್ಟಿತ್ತು. ಪ್ರಭುತ್ವಕ್ಕೂ ಪ್ರಜೆಗಳಿಗೂ ಇದ್ದ ಬಾಂಧವ್ಯವು ಒಂದು ಒಪ್ಪಂದದ ಮೇಲೆ ಬೇರೂರಿ ನಿಂತು, ಭಾರತೀಯ ರಾಜನೀತಿಕ್ರಮದಲ್ಲಿ ಬಹಳ ಸಮುಚಿತವಾಗಿಯೇ ಪ್ರಭುತ್ವ ಧನವು (ರಾಜ್ಯಸ್ವವು) ಪ್ರಜಾಸಮ್ಮತಿಯನ್ನು ಪಡೆದಿದ್ದಿತು. ಶುಕ್ರಾಚಾರ್ಯರು 'ರಾಜನು ಎಲ್ಲ ವಿಧದಲ್ಲಿಯೂ ಫಲವನ್ನು ಪಡೆದು ಅನುಭವಿಸುವಾಗಲೂ ತನ್ನ ಪ್ರಜೆಗಳನ್ನು ಸಂರಕ್ಷಿಸುವುದರಲ್ಲಿ ಅವನು ಅವರ ಗುಲಾಮನಂತೆ ನಡೆದುಕೊಳ್ಳಬೇಕು' ಎಂದು ಹೇಳಿರುವರು.

ಈಗಿನ ಪರಿಸ್ಥಿತಿಯನ್ನು ಪರಿಶೀಲಿಸಿದಲ್ಲಿ, ಕಾಲಾನುಸಾರವಾಗಿ ದೇಶಾಭಿವೃದ್ಧಿಗೆ, ಪ್ರಭುತ್ವ ಧನವು, ಅದರ ಆಡಳಿತವು, ಸಹಾಯಕಾರಿಯಾಗಿ ಸಂಬಂಧವನ್ನುಂಟುಮಾಡಿಕೊಂಡಿರುವಂತೆ, ಮತ್ತಾವ ಆಡಳಿತ ವಿಧಾನ ಭಾಗವೂ ಅಷ್ಟಾಗಿ ಬಾಂಧವ್ಯವನ್ನು ಪಡೆದಿಲ್ಲ. ವಾಸ್ತವವಾಗಿ, ಪ್ರಜಾಸೇವಾ ಧುರೀಣರೂ ದೂರ ದೃಷ್ಟಿಯುತರೂ ಆದ ರಾಜನೀತಿ ವಿಶಾರದರಿಗೆ ಅರ್ಥಶಾಸ್ತ್ರವು ಕೈಗೊಂಬೆಯಂತೆ ಇದ್ದಾಗ, ಅದೊಂದು ಬಲಿಷ್ಠ ಜನಾಂಗವನ್ನೇ ಮಾಡಬಲ್ಲುದು; ಆದರೆ ಅದನ್ನೇ ದುರುಪಯೋಗ ಮಾಡಿದಾಗ, ಅಭಿವೃದ್ಧಿ ಹೊಂದುವ ಜನಾಂಗವನ್ನೇ ಅದು ನಾಶಮಾಡಲೂ ಬಲ್ಲುದು. ಎಲ್ಲ ವಿಧವಾದ ಶಕ್ತಿಯುತ ಆಯುಧೋಪಕರಣಗಳಂತೆ, ಈ ಶಾಸ್ತ್ರವೂ

ಸಹ ದೇಶ ರಕ್ಷಣೆಯ ಮುಖ್ಯ ಆಯುಧವಾಗಿ ಒಳ್ಳೆಯದಕ್ಕಾಗಲಿ, ಕೆಡುಕಿಗಾಗಲಿ ಸಮಾನವಾಗಿ ಉಪಯೋಗಿಸಲು ಅನುಕೂಲವಾಗಿರುವುದು. ಆದುದರಿಂದಲೆ ಇದನ್ನು ಅನುಭವಶಾಲಿಗಳೂ, ದೇಶಭಕ್ತರೂ, ಪ್ರಜಾಮಿತ್ರರೂ ಆದ ಅರ್ಥಿಕಶಾಸ್ತ್ರವೇತ್ತರಿಗೆ ಒಪ್ಪಿಸಿ ಅವರ ಹೊಣೆಗಾರಿಕೆಗೆ ಬಿಡಬೇಕಾಗಿದೆ.

ಆದರ ಸಹಾಯದಿಂದ ಪ್ರಭುತ್ವವು ಭೂಮಿಯಲ್ಲಿರುವ ನೈಸರ್ಗಿಕ ವಸ್ತು-ಸಂತತಿಯನ್ನು ರೂಪುಗೊಳಿಸಬೇಕು; ಏಕೆಂದರೆ ಸಂಕುಚಿತ ಮನೋಭಾವವುಳ್ಳ ವೈಯುಕ್ತಿಕ ಒಡೆತನವು ಸ್ವಲ್ಪಕಾಲದಲ್ಲಿಯೇ ಅದನ್ನು ವ್ಯರ್ಥಮಾಡಿ ನಿಶ್ಶೇಷವಾಗಿ ಮಾಡಬಹುದು. ಪ್ರಭುತ್ವವು ಎಲ್ಲ ವಿಚಾರಗಳನ್ನೂ ದೀರ್ಘದೃಷ್ಟಿಯಿಂದ ನೋಡುವುದು ಅದರ ಕರ್ತವ್ಯ; ಆದರೆ ವ್ಯಕ್ತಿಗಳು ತಮ್ಮ ೬೦-೭೦ ವರುಷದ ಜೀವಮಾನದಲ್ಲಿಯೇ ಸಾಧ್ಯವಾದಷ್ಟು ಐಶ್ವರ್ಯವನ್ನು ಶೇಖರಿಸಬೇಕೆಂಬ ಆಶೆಯಲ್ಲಿ ಮುಂದಿನ ಜನಾಂಗಗಳಿಗೆ ತಮ್ಮ ಆಶಾಪೀಡಿತ ನಡವಳಿಕೆಗಳಿಂದ ಉಂಟಾಗಬಹುದಾದ ಹಾನಿಯನ್ನು ಗಣನೆಗೆ ತಂದುಕೊಳ್ಳದೆ ಹೋಗುವುದು ಸಹಜ. ಅಮೇರಿಕಾ ಖಂಡದ ಸಂಯುಕ್ತ ಸಂಸ್ಥಾನಗಳಲ್ಲಿ ವ್ಯವಸಾಯಕ್ಕೆ ಜಮೀನು ಹದಗೊಳಿಸುವುದಕ್ಕೆ ದೇಶದಲ್ಲಿ ಮುಖ್ಯ ಮುಖ್ಯ ದಾರಿಗಳನ್ನು ತೆರೆಯುವುದಕ್ಕೂ, ಸುಂದರ ವಾಸಸ್ಥಾನಗಳನ್ನು ಏರ್ಪಡಿಸುವುದಕ್ಕೂ ಹೇರಳವಾದ ಅರಣ್ಯದ ಸಂಪತ್ತನ್ನೇ ಭಸ್ಮೀಭೂತಮಾಡಿದುದೂ ಒಂದು ದೇಶದ ಗಿರಾಕಿಯನ್ನು ಮತ್ತೊಂದು ದೇಶವು ಪಡೆಯಲು ಪೈಪೋಟಿಯಿಂದ ವ್ಯಾಪಾರಮಾಡಿ ಲಾಭ ಸಂಪಾದನೆ ಮಾಡಲು ದೇಶದಲ್ಲಿರುವ ಎಣ್ಣೆಯ ಕೊಳಗಳನ್ನೆಲ್ಲಾ ಬರಿದು ಮಾಡಿದುದೂ, ಜನಾಂಗಕ್ಕೆ ಮಾತ್ರ ಉಂಟಾಗಿರುವ ನಷ್ಟವನ್ನು ನಿರೂಪಿಸುವ ಉತ್ತಮ ನಿದರ್ಶನವಾಗಿವೆ. ಪ್ರಸ್ತುತ ಪರಿಸ್ಥಿತಿಯಲ್ಲಿ ಪ್ರಪಂಚದ ರೀತಿಯೆಲ್ಲವೂ ಒಂದೇ ಒಂದು ಅಖಂಡ ಆರ್ಥಿಕ ಜೀವನದ ಬಲೆಯಂತಿರುವುದರಿಂದ, ಯಾವದೊಂದು ಭಾಗಕ್ಕೆ ಯಾವ ವಿಧವಾದ ನಷ್ಟವೊದಗಿದರೂ ಅದು ಪ್ರಪಂಚದ ಎಲ್ಲಾ ಭಾಗಗಳಿಗೂ ದುಷ್ಪರಿಣಾಮವುಂಟಾಗುವುದರಿಂದ ಅದು ಮಾನವ ಜನಾಂಗಕ್ಕೇ ನಷ್ಟವನ್ನು ತಂದೊಡ್ಡಿದ ನಿಜವಾದ ನಿದರ್ಶನವಾಗಿರುವುದು. ಹೀಗೆ ಈಗಿನ ಕಾಲದ ಅರ್ಥವಿಜ್ಞಾನಶಾಸ್ತ್ರವು ಪ್ರಪಂಚದ

ಮೇಲೆ ಪೂರ್ಣ ಪರಿಣಾಮವನ್ನುಂಟುಮಾಡುವ ಈ ಆಯುಧವನ್ನು ಉಪ
ಯೋಗಿಸುವುದರಲ್ಲಿ ಬಹಳ ಮಹತ್ವದ ಹೊಣೆಗಾರಿಕೆಯ ಹೊರೆಯನ್ನು ಆ
ಆರ್ಥಿಕಶಾಸ್ತ್ರವೇತ್ತರ ಮೇಲೆ ಹೊರಿಸಿದೆ.

ಜನಾಂಗಗಳು ಒಂದು ಯುಗದಿಂದ ಮತ್ತೊಂದು ಯುಗಕ್ಕೆ ಹರಿದು
ಹೋಗುವ-ವ್ಯವಸಾಯಜೀವನದಿಂದ ಕೈಗಾರಿಕೆಯ ಜೀವನಕ್ಕೆ, ಗೃಹ
ವೃತ್ತಿ ವಿಶೇಷಗಳಿಂದ ಗಿರಣಿಯ ವ್ಯವಸ್ಥೆಯ ಕ್ರಮಕ್ಕೆ ಸರಿಯುತ್ತಿರುವ—
ಪರ್ವಕಾಲಗಳಲ್ಲಿ, ಯಾವ ಸತ್ಯಪೂರಿತ ಸರಕಾರವೇ ಆಗಲಿ, ತನ್ನ ಪ್ರಜೆಗಳ
ಆರ್ಥಿಕ ಚಟುವಟಿಕೆಗಳು ಸರಿಯಾದ ದಾರಿ ಹಿಡಿಯುವಂತೆ ಮಾಡಬೇಕು.
ಹಾಗೆ ದಾರಿ ಹಿಡಿಯಿಸಿ ಕಾಲವ್ಯತ್ಯಾಸದಿಂದ ರಾಷ್ಟ್ರದ ಉತ್ಪತ್ತಿಯು
ಯಾವ ತೊಂದರೆಗೂ ಈಡಾಗದೆ ನಷ್ಟ ಹೊಂದದಂತಿರಬೇಕು. ಅಲ್ಲದೆ,
ಅದರಿಂದ ದೇಶದ ಸಂಪದಭಿವೃದ್ಧಿಯು ಹೆಚ್ಚಾಗುವಂತೆಯೂ, ಈ ಕಾಲ
ಕ್ರಮದ ವ್ಯತ್ಯಾಸದಿಂದ ಯಾವ ವಿಧವಾದ ಅನುಪಯುಕ್ತ ಹಾನಿಯೂ
ಆಗದಂತೆ ಪ್ರಭುತ್ವವು ನೋಡಿಕೊಳ್ಳಬೇಕು. ಇದನ್ನು ನಿರ್ವಹಿಸುವಾಗ
ಅನುಭವದಿಂದ ತಿಳಿದ ವಿಚಾರಗಳ ಪ್ರಯೋಗ ಹಾಗು ಪ್ರಚಾರದಿಂದ ಪ್ರಭು
ತ್ವವು ರಾಜ್ಯ ನಿರ್ವಹಣದಲ್ಲಿ ಆಗತ್ಯವಾದ ಸಂಪದಭಿವೃದ್ಧಿಗಾಗಿ ವಿವೇಚನಾ
ಪೂರಿತ ವೆಚ್ಚವನ್ನೂ ಮಾಡಬಹುದು; ಸುವ್ಯವಸ್ಥಿತವಾದ ವಿದೇಶದ ಕೇಂದ್ರ
ಗಳೊಡನೆ ಪೈಪೋಟಿಯಿಲ್ಲದಂತೆ, ಇನ್ನೂ ಪ್ರಾರಂಭ ದೆಶೆಯಲ್ಲಿರುವ ಚಿಕ್ಕ
ಪುಟ್ಟ ವ್ಯಕ್ತಿಗಳಿಗೆ ಬಾಧೆ ಬರದಂತೆ ರಕ್ಷಣೆಯನ್ನು ಮಾಡುವಂತಹ, ಚೆನ್ನಾಗಿ
ಆಲೋಚಿಸಿ ವಿಧಿಸಿದಂತಹ ಕಂದಾಯ ತೆರಿಗೆಗಳಿಂದಲಾದರೂ ಸಂಪದಭಿ
ವೃದ್ಧಿಯ ಕಾರ್ಯ ಮಾಡಬಹುದು; ಇಲ್ಲವೆ ರಾಷ್ಟ್ರದ ಸಾಂಪತ್ತಿಕ ಅಭಿ
ವೃದ್ಧಿಯ ದೃಷ್ಟಿಯಿಂದ ಅತ್ಯಾವಶ್ಯಕವಾಗಿ ಉತ್ತೇಜನಕೊಡಬೇಕಾದ
ವ್ಯಕ್ತಿಗಳಿಗೆ ಸರಕಾರದ ಸಹಾಯದಿಂದಾಗಲಿ, ಪ್ರಾರಂಭ ದೆಶೆಯಲ್ಲಿ ಅವ್ಯ
ವಸ್ಥೆಯಲ್ಲಿ ಸರಳುತ್ತ, ಪ್ರೋತ್ಸಾಹವಿದ್ದಲ್ಲಿ ಅಭಿವೃದ್ಧಿ ಹೊಂದತಕ್ಕ ಕೈಗಾರಿಕೆ
ಗಳಿಗೆ ಉತ್ತೇಜನ ಕೊಡುತ್ತ ಸರಕಾರವು ತನ್ನ ಔದಾರ್ಯವನ್ನು ತೋರಿಸಿ
ಯಾದರೂ ಮಾಡಬಹುದು. ಇಂತಹ ಮಾರ್ಗದರ್ಶಿತ್ವವೂ, ಸೂಚನೆಯೂ,
ಸಹಾಯವೂ ಸಾಮಾನ್ಯ ಪ್ರಜಾಸಮುದಾಯಕ್ಕೆ ಅನೇಕ ವಿಧವಾದ
ಅವಕಾಶಗಳನ್ನು ಕಲ್ಪಿಸಿಕೊಟ್ಟು ಅತ್ಯುತ್ತಮ ರೀತಿಯ ಸಮತ್ವವನ್ನುಂಟು

ಮಾಡುವಂತಹ ಪರಿಣಾಮಕಾರಿಯಾಗಬೇಕು. ಯಾವುದೇ ರಾಷ್ಟ್ರದ ಸೌಖ್ಯಾದಿಗಳು ಕೆಲವೇ ಮಂದಿ ಶ್ರೀಮಂತರಲ್ಲಿ ನೆಲಸಿರುವ ಐಶ್ವರ್ಯದ ಮೇಲೆ ಆಧಾರಪಟ್ಟಿರಲಾಗದು; ಅಲ್ಲದೆ ಯಾವುದೇ ರೀತಿಯದೆ ಆಗಲಿ ಏಕ ವಿಧದಿಂದ ಸಾರ್ವಜನಿಕವಾಗಿ ಒದಗಿಸಿಕೊಟ್ಟ ಅಮಿತ ಸೌಲಭ್ಯಗಳ ಮೇಲೆ ಮಾತ್ರ ಆಧಾರಪಡಲಾಗದು; ಏಕೆಂದರೆ ಮೊದಲನೆಯ ವಿಧದಿಂದ ಐಶ್ವರ್ಯದಲ್ಲಿಯೂ, ಜೀವನ ಸುಖದಲ್ಲಿಯೂ ವಿಶೇಷ ತಾರತಮ್ಯವೂ ಅಸಮತ್ವವೂ ಉಂಟಾಗುವುವಲ್ಲದೆ ಅಸಮಾಧಾನವೂ ಜನರಲ್ಲಿ ನೆಲಸುವುದು. ಎರಡನೆಯದರಿಂದ ಅಖಂಡ ರಾಷ್ಟ್ರವೇ ತೊಂದರೆಯಲ್ಲಿ ಬಿದ್ದು ಜನರನ್ನು ಆ ಮಾಯಾಮೋಹದಲ್ಲಿ ಕೆಡವುದರಿಂದ ಅನಾವೃಷ್ಟಿಯು ದೇಶದಲ್ಲಿ ತಲೆದೋರಿದಾಗ ರೈತಾಪಿ ಜನಾಂಗವು ಹೇಗೆ ಹಾಹಾಕಾರದಿಂದ ಬೊಬ್ಬೆ ಇಡುವುದೋ ಅಂತಹ ಸ್ಥಿತಿಯುಂಟಾಗುವುದು. ಒಂದೇ ಮಾರ್ಗ ಹಿಡಿದು ನಡೆಯುವಂತೆ ಮಾಡಿರುವ ಯಾವುದೇ ರಾಷ್ಟ್ರವಾಗಲಿ ತನ್ನನ್ನು ತಾನು ರಕ್ಷಿಸಿಕೊಳ್ಳುವುದರಲ್ಲಿ ಬಹಳ ತೊಂದರೆಗಳಿಗೀಡಾಗುವುದು; ಸರಿಯಾದ ಪ್ರಮಾಣದಿಂದ ಅವಕಾಶಗಳನ್ನು ವಿಸ್ತರಿಸದಿದ್ದರೆ ಅಭಿವೃದ್ಧಿ ಹೊಂದುತ್ತಿರುವ ಪ್ರಜಾಸಂಖ್ಯಾನುಸಾರ ಉತ್ಪತ್ತಿ ಬೆಳೆಯದು. ಪ್ರಜಾಸುಖದಲ್ಲಿ ಗಾಢ ವಿಶ್ವಾಸವನ್ನಿಟ್ಟಿರುವ ಪ್ರಭುತ್ವವು ಕಾಲಾನುಗುಣವಾದ ಪರಿಸ್ಥಿತಿಗಳ ಮೇಲೆ ತನ್ನ ರಕ್ಷಣಾದೃಷ್ಟಿಯನ್ನು ತೋರುತ್ತ, ಅಭಿವೃದ್ಧಿಗೆ ಉತ್ತೇಜನ ಕೊಡುತ್ತ, ವಿನಾಶವನ್ನು ತಡೆಗಟ್ಟುತ್ತ, ಬೇಕಾದಷ್ಟನ್ನು ಮಾಡಬಲ್ಲುದು. ವ್ಯಕ್ತಿ, ವ್ಯಾಪಾರ ವಾಣಿಜ್ಯಗಳ ಶಾಸ್ತ್ರೀಯ ಸಮ್ಮಿಲನವು ಪ್ರಜಾಸಮುದಾಯಕ್ಕೆ ಸೌಖ್ಯವನ್ನು ತರುವದಲ್ಲದೆ ಐಶ್ವರ್ಯವಂತರಾಗಲಿ, ಬಡವರಾಗಲಿ, ಉತ್ತಮರಾಗಲಿ, ಕೀಳು ದರ್ಜೆಯವರಾಗಲಿ, ಎಲ್ಲಾ ವ್ಯಕ್ತಿಗಳಿಗೂ ಜೀವನದ ಸಿರಿ ಸೌಖ್ಯಗಳನ್ನೂ, ಅವರೆಲ್ಲರಿಗೂ ಶಾಂತಿ ಸಮಾಧಾನ ತೃಪ್ತಿಗಳನ್ನೂ ತಂದುಕೊಡುವುದು. ಜಾನ ರಸ್ಕಿನ್ನನು ' ಜೀವನ ಸೌಖ್ಯವಲ್ಲದೆ ಮಾನವನಿಗೆ ಬೇರೊಂದು ಐಶ್ವರ್ಯವಿಲ್ಲ. ' ಎಂಬುದಾಗಿ ಸತ್ಯವನ್ನೆ ನುಡಿದಿರುವನು. ಜೆ. ಎ. ಹಾಬ್ಸನ್ನನು ' ಸಂಪತ್ತೆಂಬುದಕ್ಕೆ ಹಣಕಾಸಿನ ಮಟ್ಟಕ್ಕೆ ಪ್ರತಿಯಾಗಿ ಮಾನವನ ಸುಖಜೀವನದ ಮಟ್ಟವನ್ನು ಪರಿಗಣಿಸುವಂತೆ ಆಗಬೇಕು ' ಎಂದು ಸಲಹೆ ಇತ್ತಿರುವನು. ಪ್ರಭುತ್ವದ ರೀತಿನೀತಿಯ

ಲಾಭವನ್ನು ನಾವು ನಿಷ್ಪಕ್ಷಪಾತ ದೃಷ್ಟಿಯಿಂದ ವಿಮರ್ಶೆಮಾಡುವಾಗ, ದೇಶದ ಸಾರ್ವಜನಿಕ ಸೌಖ್ಯಕ್ಕಾಗಿ ತಮ್ಮ ತನುಮನಗಳನ್ನು ಸಂತೋಷ ದಿಂದ ಸಲ್ಲಿಸುವವರೆಲ್ಲರಿಗೂ, ತಮ್ಮ ಕರ್ತವ್ಯವನ್ನು ಸ್ವತಂತ್ರವಾಗಿಯೂ ಯಾವ ಎಡರು ತೊಡರುಗಳಿಲ್ಲದೆಯೂ ನೆರವೇರಿಸುವಂತೆ, ಸಮಸ್ತ ಸದವ-ಕಾಶಗಳನ್ನೂ ಒದಗಿಸಿಕೊಡುವುದೇ ನಮ್ಮ ಧ್ಯೇಯವಾಗಿರಬೇಕು.

'ತೋಟಗಾರನು ತನ್ನ ತೋಟದಲ್ಲಿರುವ ಗಿಡಗಳನ್ನು ಪೋಷಿಸಿದ ಮೇಲೆ ಅದರ ಹೂ ಕಾಯಿ ಹಣ್ಣುಗಳನ್ನು ಹೇಗೆ ತೆಗೆದುಕೊಳ್ಳುವನೋ ಹಾಗೆಯೇ, ರಾಜನು ತನ್ನ ಪ್ರಜೆಗಳ ಸೌಖ್ಯವನ್ನು ತಾನು ನೋಡಿಕೊಂಡ ಮೇಲೆಯೇ ತನ್ನ ಆದಾಯವನ್ನು ವಸೂಲು ಮಾಡಿಕೊಳ್ಳಬಹುದು' ಎಂದು ಶುಕ್ರಾಚಾರ್ಯರು ಹೇಳಿರುವರು. ತೆರಿಗೆಯನ್ನು ವಿಧಿಸುವ ವಿಧಾನವು ತನ್ನ ಪ್ರಜಾವರ್ಗಕ್ಕೆ ನೋವನ್ನುಂಟುಮಾಡುವಂತಿರಬಾರದು. ಕೌಟಿಲ್ಯನು ಹೇಳಿದ ಉಪಮಾನ ರೀತ್ಯಾ, ಗಿಡಕ್ಕೆ ತೊಂದರೆಯಾಗದಂತೆ ಹಣ್ಣು ಮಾಗಿ ದಾಗ ಕಳಚಿಕೊಳ್ಳುವ ರೀತಿಯಲ್ಲಿ, ತೆರಿಗೆಗಳನ್ನು ಪ್ರಜೆಗಳಿಂದ ಪಡೆಯ ಬೇಕು. ಕುರಿಯ ಉಣ್ಣೆಯನ್ನು ಕತ್ತರಿಸಬೇಕೇ ವಿನಾ ಅದರ ಚರ್ಮವನ್ನೇ ಸುಲಿಯಲಾಗದು. ಬಹಳ ಜಾಗರೂಕತೆಯಿಂದ ನಿಯಂತ್ರಿಸಲ್ಪಟ್ಟ ತೆರಿಗೆ ಯನ್ನು ವಿಧಿಸುವ ವಿಧಾನವು, ವಿಶೇಷ ಆದಾಯವನ್ನು ಕೊಡುತ್ತಾ, ತೆರಿಗೆ ಯನ್ನು ಸಲ್ಲಿಸುವವನ ಉತ್ಪನ್ನ ಶಕ್ತಿಯನ್ನು ಕಡಿಮೆ ಮಾಡಕೂಡದು. ರಾಷ್ಟ್ರದ ಆಸ್ತಿಪಾಸ್ತಿಗಳಿಗೆ ತೊಂದರೆ ಬಾರದಂತೆ ಹೆಚ್ಚಾಗಿ ಉಳಿದುದರಲ್ಲಿ ಮಾತ್ರ ಕಂದಾಯವು ಕೊಡುವಂತಿರಬೇಕು. ಒಬ್ಬ ಇದ್ದಿಲು ವ್ಯಾಪಾರಿಯು ತನ್ನ ಲಾಭಕ್ಕಾಗಿ ತನಗೆ ಬರುವ ಆದಾಯದ ಮೂಲವನ್ನೇ ಗಮನಕ್ಕೆ ತಂದು ಕೊಳ್ಳದೆ, ಮರಗಳನ್ನು ಕಡಿದು, ಅವುಗಳನ್ನು ಸುಟ್ಟು ಇದ್ದಿಲು ಮಾಡುವಂತೆ ಪ್ರಭುತ್ವವು ಇರಲಾಗದು; ಹಾಗಲ್ಲದೆ ಪ್ರಭುತ್ವವು ಹೂಗಾರನಂತೆ ಗಿಡದಲ್ಲಿ ರುವ ಹೂಗಳನ್ನು ತಾನು ಬಿಡಿಸದಿದ್ದರೆ ಬಾಡಿ ಹೋಗುವುದರಿಂದ ತೆಗೆದು ಕೊಂಡು, ಆ ಗಿಡವನ್ನು ಮತ್ತೆ ಚಿಗುರಿ ಹೂ ಬಿಡುವಂತೆ ಮಾಡಬೇಕು. ತೆರಿಗೆಯನ್ನು ವಿಧಿಸುವ ಸಂಭವವನ್ನು ಜಾಗರೂಕತೆಯಿಂದ ಪರ್ಯಾಲೋಚಿಸ ಬೇಕಲ್ಲದೆ ಆದರ ಹೊರೆಯನ್ನು ಹೊತ್ತುಕೊಳ್ಳುವವರ ಶಕ್ತಿಸಾಮರ್ಥ್ಯಗಳನ್ನು ವಿಮರ್ಶಿಸಿ, ಶಕ್ತಿಗೆ ತಕ್ಕಂತೆ ವಿಧಿಸಬೇಕು. ಜೀವನವನ್ನು ಹೊರೆದುಕೊಳ್ಳು

ವದೇ ಕಷ್ಟವಾಗಿರುವವರ ಹೊರೆಯನ್ನು ಪ್ರಾಪಂಚಿಕ ಸೌಖ್ಯವನ್ನು ಅತಿಶಯವಾಗಿ ಪಡೆದಿರುವವರು ಹೊತ್ತುಕೊಂಡು ಅವರನ್ನು ಬಿಡುಗಡೆ ಮಾಡಬೇಕು. ಕರರೂಪೀ ತೆರಿಗೆಗಳು ವಿಚಕ್ಷಣೆಯಿಂದಲೂ ಶಾಸ್ತ್ರವಿಜ್ಞಾನದಿಂದಲೂ ಆರಿಸಲ್ಪಟ್ಟ ವಸ್ತುಗಳ ಮೇಲೆ ಮಾತ್ರ ವಿಧಿಸಲ್ಪಡಬೇಕು. ಆದರಿಂದ ಸ್ವದೇಶೀಯ ವೃತ್ತಿ ಉದ್ಯಮಗಳಿಗೆ ಪ್ರೋತ್ಸಾಹ ಸಿಗಬೇಕು; ಅತ್ಯಾವಶ್ಯಕ ವಸ್ತು ಸಾಮಗ್ರಿಗಳ ಮೇಲೆ ತೆರಿಗೆಯನ್ನು ಹಾಕುವುದರಿಂದ ಜೀವನ ಮಟ್ಟವೇ ಹೆಚ್ಚಾಗಿ ಬಡ ಜನರು ತುಳಿಯಲ್ಪಡಲಾಗದು. ಅಪರೋಕ್ಷ ತೆರಿಗೆಗಳು, ಆ ಹೊರೆಯನ್ನು ಹೊತ್ತುಕೊಳ್ಳುವವನಿಗೆ ಅದರ ಅರಿವೇ ಇಲ್ಲದಂತಿರುವುದರಿಂದ, ಆ ವಿಧದ ತೆರಿಗೆಗಳನ್ನು ವಿಧಿಸುವ ವಿಧಾನವು ಬಹಳ ಉಪಯುಕ್ತವಾದುದು. ದುಂಬಿಗಳು ಹೂವಿನಲ್ಲಿರುವ ಮಕರಂದವನ್ನು ಹೂವಿಗಗೋಚರವಾಗದಂತೆಯೇ ಆಸ್ವಾದಿಸುವಂತೆ ಅದರ ಈ ಸ್ವಾಭಾವಿಕ ಗುಣವಿರಬೇಕು. ಈ ಮಹತ್ತರವಾದ ಕರ್ತವ್ಯವನ್ನೂ ಹೊಣೆಗಾರಿಕೆಯನ್ನೂ ವಹಿಸಿರುವವರು, ಎಷ್ಟು ಎಚ್ಚರಿಕೆಯಿಂದಿರಬೇಕೆಂಬುದನ್ನು ತಿಳಿಯಪಡಿಸುತ್ತಿದೆ.

ಹಾಗೆ ಶೇಖರಿಸಿದ ಆದಾಯವನ್ನು ವಿನಿಯೋಗ ಮಾಡುವುದರಲ್ಲಿ ಪ್ರಜಾಸಮುದಾಯದ ಜೀವನದ ಉತ್ಪನ್ನವು ಅಭಿವೃದ್ಧಿಗೊಳ್ಳುವಂತೆ ಏರ್ಪಟ್ಟಿರಬೇಕು. ಯಾರು ಚೆನ್ನಾಗಿ ಕೊಡಬಲ್ಲರೋ ಅಂತಹ ಪ್ರಜಾವರ್ಗದವರಿಂದ, ತೆರಿಗೆಗಳು ಸಲ್ಲಿಸಲ್ಪಡಬೇಕು; ಸಿರಿವಂತರಿಗೆ ಬಡವರ ವಿದ್ಯಾಭ್ಯಾಸಕ್ಕಾಗಿ ಕಂದಾಯವು ಕಟ್ಟಲ್ಪಟ್ಟಾಗ ಅದು ಬೇಕೆಂದು ಆತುರಪಡುವ ಬಡವರ ಮೇಲೆ ಮಳೆಗರೆದಂತೆ ಸುರಿಸಲ್ಪಡಬೇಕು. ವೈಯ್ಯಕ್ತಿಕ ಆರ್ಥಿಕ ಜೀವನದಲ್ಲಿಯೂ ಸಹ ಹಣವನ್ನು ಗಳಿಸುವದಕ್ಕಿಂತ ಗಳಿಸಿದ ಹಣವನ್ನು ಉಪಯೋಗಿಸುವುದರಲ್ಲಿ ಬಹಳ ಹೆಚ್ಚಿನ ವಿವೇಕ ವಿವೇಚನೆಯಿರಬೇಕಾಗಿದೆ. ಇದೇ ಸಮಸ್ಯೆಯೇ ಪ್ರಭುತ್ವಧನದಲ್ಲಿ ಅಂದರೆ ಮತ್ತೂ ಕಠಿಣತರವಾಗಿದೆ. ತನ್ನ ಹೊಟ್ಟೆಯನ್ನು ಮಾತ್ರ ಹೊರೆದುಕೊಳ್ಳುವ ಚೈತನ್ಯವುಳ್ಳ ಒಬ್ಬ ಮನುಷ್ಯನಿಂದ ಒಂದು ರೂಪಾಯಿಯನ್ನು ತೆಗೆಯುವುದು ತೀರ ಅವಿವೇಕವಾದುದು; ಅವನಿಗೆ ಅದು ತನ್ನ ಜೀವನಕ್ಕೆ ಬಹಳ ಉಪಯುಕ್ತವಾದುದಾಗಿದೆ; ಅಂತಹದನ್ನು ಅವನಿಗಿಂತಲೂ

ಅನೇಕ ವಿಧದಿಂದ ಉತ್ತಮ ರೀತಿಯಲ್ಲಿರುವವನಿಗಾಗಿ ಉಪಯೋಗಿಸು ವದೆಂದರೆ ಅತ್ಯಂತ ಅವಿವೇಕಯುತವಾದುದು. ಇದರಿಂದ ರೂಪಾಯಿಗೆ ರೂಪಾಯಿಸಷ್ಟು ರಾಷ್ಟ್ರಾದಾಯವು ವ್ಯರ್ಥವಾಗುವುದು. ತೆರಿಗೆಯು ಯಾವ ಸಮಾಜದ ಶಕ್ತಿಯ ಮೇಲೆ ವಿಧಿಸಲ್ಪಡುವುದೋ, ಯಾವ ಸಮಾಜಕ್ಕೆ ಆ ನಿಧಿಯಿಂದ ಪರಿಪೂರ್ಣ ಉಪಕಾರವುಂಟಾಗುವುದೋ ಎಂಬುದನ್ನು ಗಮನದಲ್ಲಿಡಬೇಕು.

ಪ್ರಜೆಗಳ ಆರ್ಥಿಕಾಭಿವೃದ್ಧಿಯನ್ನು ಗಮನದಲ್ಲಿಟ್ಟುಕೊಂಡು, ಆಡಳಿತ ಕ್ರಮವು ತಾನೆಷ್ಟು ಮಟ್ಟಿಗೆ ನಿರ್ವಹಿಸಬಲ್ಲುದೋ ಅಷ್ಟರಮಟ್ಟಿಗೆ ಕಾರ್ಯ ಸಾಧಕವಾಗಿಯೂ ಸತ್ವಪೂರಿತವಾಗಿಯೂ ಇರಬೇಕು. ವರುಷಕ್ಕೆ ೬೦೦೦ ರೂಪಾಯಿಯ ವರಮಾನವುಳ್ಳವನೊಬ್ಬನು, ತನ್ನ ಕುಟುಂಬವು ಬಹಳ ಹೆಚ್ಚಿಲ್ಲದಿದ್ದಲ್ಲಿ, ಒಂದು 'ಫೋರ್ಡ್' ಮೋಟಾರು ಕಾರನ್ನು ಕೊಳ್ಳುವುದು ನ್ಯಾಯವಾಗಿ ಕಾಣಬಹುದು. ಆದರೆ ಅವನು 'ರೋಲ್ಸ್‌ರಾಯಿಸ್' ಮೋಟಾರು ಕಾರನ್ನು ತೆಗೆದುಕೊಂಡು ಅದನ್ನು ನೋಡಿಕೊಳ್ಳುವುದು ಉನ್ಮತ್ತತೆಯಲ್ಲದೆ ಮತ್ತೇನೂ ಆಗಲಾರದು. ಎಲ್ಲ ವಿಚಾರಗಳಲ್ಲಿಯೂ ರಾಜ್ಯಾಡಳಿತ ವಿಧಾನದಲ್ಲಿಯೂ ಸಹ ಪ್ರಮಾಣವರಿತು ನಡೆದುಕೊಳ್ಳುವ ಜ್ಞಾನವಿರಬೇಕು. ಬಹಳ ವೆಚ್ಚದಿಂದ ಆಡಳಿತವನ್ನು ನಡೆಯಿಸುತ್ತ, ಅದೇ ಸಯುಕ್ತಿಕವಾದುದೆಂದು ಸಮರ್ಥಿಸುವ ವಾದವು ಸರಿಯಾದುದಲ್ಲ. ಆಡಳಿತದ ಸಾಮರ್ಥ್ಯವನ್ನು ಅದು ನಡೆಯಿಸುವ ನಿತ್ಯ ಕರ್ತವ್ಯದ ಯಾಂತ್ರಿಕ ಕ್ರಮದ ಆಧಾರದ ಮೇಲೆ ವಿಮರ್ಶಿಸದೆ, ಪ್ರಜಾಸಮುದಾಯದ ಸಾಮಾನ್ಯ ಸುಖ ಸಂಪತ್ತಿನ ಒರೆಗಲ್ಲಿನ ಮೇಲೆ ನೋಡಿ ನಿರ್ಧರಿಸಬೇಕು. ಜಾತೀಯ ಜ್ಞಾನದ ಬೆಳವಣಿಗೆಗೆ ಉಪಯುಕ್ತವಾದ ವಿಶಾಲ ಮಾರ್ಗಗಳನ್ನು ನಿರ್ಮಾಣ ಮಾಡುವುದರಲ್ಲಿ ಬೇಕಾದ ಊಹಾಶಕ್ತಿಗೆ, ಅದರ ಅಗತ್ಯಕ್ಕೆ, ಯಾಂತ್ರಿಕ ಸಮರ್ಥತೆಯು ಒಳಪಟ್ಟಿರಬೇಕು. ತನ್ನ ಕ್ರಮಾದಿ ವಿವರಗಳಲ್ಲಿ ಅದು ಎಷ್ಟೇ ಶಕ್ತಿಯುತವಾಗಿದ್ದರೂ. ಅಂತಹ ಪ್ರಜಾಭಿವೃದ್ಧಿಗೆ ದಾರಿ ತೋರಿಸದ ರಾಜ್ಯಾಡಳಿತವು ನೀತಿಲೋಪವಾದುದಾಗಿರುವುದು. ತನ್ನ ಆಡಳಿತದ ವೆಚ್ಚವನ್ನು ನಿರ್ವಹಿಸಲು ಒಂದು ರಾಷ್ಟ್ರವು ತನ್ನ ಶಕ್ತಿಯನ್ನು ತೂಕ ಮಾಡಿ ನೋಡಿದರೆ, ಆ ರಾಷ್ಟ್ರದಲ್ಲಿರುವ ಅಧಿಕಾರಿಗಳ ವೇತನಗಳು ಅಲ್ಲಿಯ

ಸಾಮಾನ್ಯ ಪ್ರಜೆಗಳ ಸರಾಸರಿ ಆದಾಯದೊಂದಿಗೆ ಸರಿ ಸಮಾನವಾಗಿರುವಂತೆ ಹೊಂದಿಸಿ ಕಟ್ಟಲ್ಪಟ್ಟಿರಬೇಕು. ಇಂತಹ ಪದ್ಧತಿಯು ಸರಿಯಾದ ಪ್ರಮಾಣವನ್ನು ಒದಗಿಸಿ ಕೊಡುವುದಲ್ಲದೆ, ಬೇರೆ ಬೇರೆ ಜನಾಂಗಗಳಿಗಿರುವ ಶಕ್ತಿಸಾಮರ್ಥ್ಯಗಳ, ದೇಶ ದೇಶಗಳ ವ್ಯಾಪಾರ ಸ್ಥಿತಿಗಳ ವ್ಯತ್ಯಾಸಗಳನ್ನು ತನ್ನಷ್ಟಕ್ಕೆ ತಾನೇ ಏಕಕಾಲದಲ್ಲಿಯೇ ತೆಗೆದುಹಾಕಿ ಬಿಡುತ್ತದೆ.

ಸಂಪತ್ಸಮೃದ್ಧಿಯಾದ ರಾಷ್ಟ್ರವೊಂದನ್ನು ನಿರ್ಮಿಸುವುದರಲ್ಲಿ ಆವಶ್ಯಕವಾದ ಈ ಸಾಧನೋಪಕರಣಗಳ ಸಾಮಾನ್ಯವಿಮರ್ಶೆಯನ್ನು ನಮ್ಮ ಮನಸ್ಸಿನಲ್ಲಿಟ್ಟುಕೊಂಡು, ನಮ್ಮ ಭರತಖಂಡದಲ್ಲಿರುವ ಪರಿಸ್ಥಿತಿಯನ್ನು ನಾವು ಪರಿಶೀಲಿಸೋಣ. ಭಾರತದ ರಾಜ್ಯಾದಾಯದ ರೀತಿ ನೀತಿಯನ್ನೂ, ಶಕ್ತಿಸಾಮರ್ಥ್ಯವನ್ನೂ ಸರಿಯಾಗಿ ತಿಳಿದುಕೊಳ್ಳಬೇಕೆಂದರೆ, ಅಶೋಕ, ಚಂದ್ರಗುಪ್ತ ಮೊದಲಾದವರ ಚಕ್ರಾಧಿಪತ್ಯದಲ್ಲಿದ್ದ ವೈಭವವನ್ನು ಪಡೆದಿದ್ದ ಪ್ರಾಚೀನ ಭಾರತದ ಪರಿಸ್ಥಿತಿಯನ್ನು ಬಿಟ್ಟು, ದೇಶದ ಈಗಿನ ಆರ್ಥಿಕ ಪರಿಸ್ಥಿತಿಗೆ ಕಾರಣೀಭೂತವಾದ ಪ್ರಕೃತದ ಪ್ರಭುತ್ವ ವಿಧಾನವನ್ನೇ ಪರಿಶೀಲಿಸುವುದು ಅತ್ಯಾವಶ್ಯಕವಾಗಿದೆ.

—

## ೨. ೧೯ನೆಯ ಶತಮಾನದ ಭಾರತದ ಪರಿಸ್ಥಿತಿ

ಅನೇಕ ಶತಮಾನಗಳಿಂದಲೂ ಹಿಂದೂದೇಶದ ಇತಿಹಾಸದಲ್ಲಿ ಸಂಪತ್ತೂ ವಿಪತ್ತೂ, ಶಾಂತಿಯೂ ಯುದ್ಧವೂ, ನ್ಯಾಯವೂ ಅನ್ಯಾಯವೂ, ಧರ್ಮ ದೌರ್ಜನ್ಯವೂ, ಒಂದಾದ ಮೇಲೊಂದಾಗಿ ಒಟ್ಟಿನಲ್ಲಿ ಬಂದಾಗ್ಯೂ ಸಾಮಾನ್ಯ ಪರಿಸ್ಥಿತಿಯನ್ನು ಪರಿಶೀಲಿಸಿದರೆ, ಹಿಂದೂದೇಶವು ಆಗಿನ ಕಾಲದ ಇತರ ದೇಶಗಳ ಸ್ಥಿತಿಗಳೊಡನೆ ಹೋಲಿಸಿ ನೋಡಿದಾಗ ವಿಶೇಷತರದ ಶಾಂತಿ ಸುಖ ಸಮೃದ್ಧಿಗಳನ್ನು ಪಡೆದು ಸುಖದಿಂದಿದ್ದಿತೆಂದು ನಾವು ಮನಗಾಣುವೆವು. ಮಧ್ಯಕಾಲದಲ್ಲೆಲ್ಲ ಭರತಖಂಡವು ಪ್ರಪಂಚದ ಆರ್ಥಿಕ ಚಟುವಟಿಕೆಯ ಕೇಂದ್ರವಾಗಿದ್ದಿತು. ಅಮೇರಿಕಾ ಖಂಡವನ್ನು ಕಂಡು

ಕೊಂಡಿದ್ದೂ ಸಹ ಹಿಂದೂದೇಶದೊಡನೆ ನೇರವಾದ ವ್ಯಾಪಾರ ಸಂಬಂಧ ವನ್ನುಂಟು ಮಾಡಿಕೊಳ್ಳುವುದಕ್ಕಾಗಿ. ಆಗಿನ್ನ ಸ್ಥಿತಿಗತಿಗನುಸಾರವಾಗಿ, ಭರತಖಂಡವು ಬಹಳವಾಗಿ ವೃತ್ತಿಪೂರ್ಣವಾಗಿದ್ದಿತು. ಆಗಿನ ಕಾಲದಲ್ಲಿ ಪರದೇಶದ ವ್ಯಾಪಾರವು ಭಂಗಾರಕ್ಕೆ ಬದಲಾಗಿ ಸುಖಭೋಗವಸ್ತು ಗಳಾದ ಚಿಕ್ಕಪುಟ್ಟ ಅತ್ಯಮೂಲ್ಯ ವಸ್ತುಗಳಲ್ಲಿ ಅಡಗಿದ್ದಿತು. ಸುರಕ್ಷ ತೆಯೂ ಸರಬರಾಯಿಯೂ ಪದಾರ್ಥಗಳನ್ನು ಬೆಲೆಗೆ ಕೊಡುವುದರಲ್ಲಿ ಮುಖ್ಯಾಂಶಗಳಾಗಿದ್ದುದರಿಂದ, ಸ್ಥೂಲವೂ ಅಲ್ಪಮೂಲ್ಯವಾದುದೂ ಆದ ಕಚ್ಚಾ ವಸ್ತುಗಳನ್ನು ಕೊಟ್ಟು ತೆಗೆದುಕೊಳ್ಳುವದಕ್ಕಾಗಲಿ ಬದಲುಮಾಡಿ ಕೊಳ್ಳುವುದಕ್ಕಾಗಲಿ ಅಷ್ಟು ಯೋಗ್ಯವೆಂದು ಕಂಡುಬರಲಿಲ್ಲ. ಅಖಂಡ ವೈಭವದಲ್ಲಿದ್ದ ರೋಮಚಕ್ರಾಧಿಪತ್ಯವೂ, ಭಂಗಾರವು ಹಿಂದೂದೇಶ ದೊಳಕ್ಕೆ ಹರಿದು ಬರುತ್ತಿರುವದನ್ನು ಟೀಕಿಸಿತು. ಹೇಗಾದರೂ ಆಗಲಿ, ಭರತಖಂಡವು ಬಹು ಅಮೂಲ್ಯ ಲೋಹಗಳನ್ನು ಕೊಳ್ಳುವುದರಲ್ಲಿ ತಡೆಗಟ್ಟ ಲಾರದುದೆಂದು ಕೀರ್ತಿಯುಳ್ಳದ್ದು. ಆ ನಂಬಿಕೆಗೆ ಎಷ್ಟೋ ವಿರುದ್ಧವಾದ ಸಾಕ್ಷ್ಯ ಸಾಹಿತ್ಯವಿದ್ದರೂ ಇಂದಿಗೂ ಸಹ ಅದೇ ಕೀರ್ತಿಯನ್ನೇ ಪಡೆದು, ಪ್ರಾಚೀನ ಕಾಲದಲ್ಲಿ ಪರದೇಶದ ವ್ಯಾಪಾರ ಪರಿಸ್ಥಿತಿಯ ಆಧಾರದ ಮೇಲೆಯೇ ಆ ಕೀರ್ತಿಯನ್ನು ಇನ್ನೂ ಉಳಿಸಿಕೊಂಡಿದೆ. ಹಿಂದೂದೇಶವು ತಾನು ತಯಾರಿಸಿದ ವಸ್ತುಗಳನ್ನು ಪರದೇಶಕ್ಕೆ ಕಳುಹಿಸಿ, ಅದಕ್ಕೆ ಬದಲಾಗಿ ಮುಖ್ಯವಾಗಿ ಚಿನ್ನವನ್ನು ತರಿಸಿಕೊಳ್ಳುತ್ತಿದ್ದಿತು. ತನ್ನಲ್ಲಿರುವ ಕಚ್ಚಾ ಪದಾರ್ಥಗಳನ್ನು ತನ್ನ ಕಲಾಕೌಶಲ್ಯ ನಿಪುಣರಿಂದ ಸಿದ್ಧ ವಸ್ತುಗಳಾಗಿ ತಯಾರಿಸಿ, ಒಂದು ಕಡೆ ಪರಿಸಿಯನ್ ಕೊಲ್ಲಿ, ಅರಬ್ಬೀಸ್ಥಾನದ ಮಾರ್ಗ ವಾಗಿ ಯುರೋಪಖಂಡಕ್ಕೂ, ಮತ್ತೊಂದು ಕಡೆ ಚೀನಾ, ಜಪಾನು ದೇಶ ಗಳಿಗೂ ತನ್ನ ತಯಾರಿಕೆಯ ವಸ್ತುಗಳನ್ನು ಹಿಂದೂಮಹಾಸಾಗರ*ದ ಮೂಲಕ ಕಳುಹಿಸುತ್ತಿದ್ದಿತು. ಹೀಗೆ ತನ್ನ ದೇಶದಲ್ಲಿಯೂ, ಸಮುದ್ರದ ಮೇಲೂ, ನಗರಗಳಲ್ಲಿಯೂ, ತನ್ನ ಪ್ರಜೆಗಳಿಗೆ ಲಾಭದಾಯಕವಾದ ಉದ್ಯೋಗಗಳನ್ನು ಒದಗಿಸಿಕೊಡುತ್ತ, ಅಖಂಡ ಚಟುವಟಿಕೆಯ ಕೇಂದ್ರ

---

* ಶ್ರೀ ರಾಧಾಕುಮುದ ಮುಖರ್ಜಿ 'ಭಾರತೀಯ ನೌಕಾ ಇತಿಹಾಸ' ೪ನೆಯ ಪುಟ.

ವಾಗಿತ್ತು. ತನ್ನ ಪ್ರಜೆಗಳ ಜಾಣ್ಮೆಗೆ ಅವುಗಳ ಪ್ರದರ್ಶನಕ್ಕೆ ಬೇಕಾದಷ್ಟು ಮಹತ್ವಪೂರಿತವಾದ ಮಾರ್ಗಗಳ ಸಂಯೋಜನೆ ಪಡೆದಿದ್ದಿತು. ಪಶ್ಚಿಮ ತೀರದಲ್ಲಿ ಕಲ್ಲಿಕೋಟೆಯಲ್ಲಿ ಹತ್ತಿಯಿಂದ ಅತ್ಯಂತ ಅಂದವಾದ 'ಕ್ಯಾಲಿಕೋ' ಬಟ್ಟೆಯಾಗಿ ನೇಯ್ಗೆಯಲ್ಲಿ ನಿಪುಣರಾದವರಿಂದ ನೇಯಲ್ಪಡುತ್ತಿದ್ದಿತಲ್ಲದೆ, ಪೂರ್ವ ತೀರದಲ್ಲಿ ಮಚಲೀಪಟ್ಟಣದಲ್ಲಿ ಮೋಹದಾಯಕ 'ಮಸ್ಲಿನು'ಗಳಾಗಿ ಮಾಡಲ್ಪಡುತ್ತಿತ್ತು. ಹದಿನೆಂಟನೆಯ ಶತಮಾನದ ಉತ್ತರ ಭಾಗದಲ್ಲಿ, ಇಂಗ್ಲೆಂಡಿನೊಡನೆ ಇಂತಹ ವಸ್ತ್ರಾದಿಗಳಲ್ಲಿ ಬೆಳಸಿದ ವ್ಯಾಪಾರವು, ಹಿಂದೂದೇಶದ ಪೈಪೋಟಿಯನ್ನು ತಡೆಯಲು ರಕ್ಷಣೆಯ ಸುಂಕವನ್ನೂ ಏರಿಸಬೇಕೆಂದು ಪ್ರಚಂಡ ಆವಾಂತರವನ್ನುಂಟುಮಾಡುವಷ್ಟು ಅಭಿವೃದ್ಧಿಯನ್ನು[೧] ಪಡೆದಿದ್ದಿತು. ೧೭೩೫ ರಲ್ಲಿ 'ಜಂಟಲ್‌ಮೆನ್ಸ್ ಮ್ಯಾಗ್ಝಿನ್' ವೃತ್ತಪತ್ರಿಕೆಯಲ್ಲಿ ಉಲ್ಲೇಖವಾದ ಕೆಲವು ವಾಕ್ಯಗಳು ಇಂಗ್ಲೆಂಡಿನೊಡನೆ ಹಿಂದೂದೇಶದ ವ್ಯಾಪಾರವು ತೀವ್ರವಾಗಿ ಮಾಡುತ್ತಿದ್ದ ಪೈಪೋಟಿಯನ್ನು ಸೂಚಿಸುತ್ತದೆ.

ಇಂಗ್ಲೆಂಡಿನಲ್ಲಿ ಬ್ರಿಟಿಶ ನೇಯ್ಗೆಯವರು ಸಂಪೂರ್ಣವಾಗಿ ನಾಶ ಹೊಂದದಂತೆ ಸಂರಕ್ಷಣೆಯನ್ನು ಹೊಂದುವುದಕ್ಕಾಗಿ ಅತಿಶಯವಾದ ಸುಂಕಗಳು ಹಾಕಲ್ಪಟ್ಟವು.[೨] ಬಹಳ ಚಮತ್ಕಾರದಿಂದ ದಂತದಲ್ಲಿ ಮಾಡಿದ ಕೆತ್ತನೆಯ ವಸ್ತುಗಳಿಗೆ ಎಲ್ಲೆಲ್ಲಿಯೂ ಬಹಳ ಗಿರಾಕಿಯಿದ್ದಿತು; ಅಷ್ಟೇ ಅಲ್ಲದೆ ಹಿಂದೂದೇಶದ ಸಂಬಾರವಸ್ತು ಮನೆಮಕ್ಕಳ ಮಾತಾಗಿ ಹೋಗಿದ್ದಿತು. ರೇಷ್ಮೆ, ಕಸೂತಿಯ ವಸ್ತ್ರಗಳು, ರತ್ನಗಂಬಳಿಗಳು ಶ್ರೀಮಂತರ ಸೌಂದರ್ಯ ವಸ್ತುಗಳಾಗಿದ್ದುವು.

ಈ ವ್ಯಾಪಾರ ಚಟುವಟಿಕೆಯೇ ನೌಕಾ ನಿರ್ಮಾಣಕ್ಕೆ ಅವಕಾಶವನ್ನು ಕೊಟ್ಟಿತು. ಆಚಾರ್ಯ ರಾಧಾಕುಮುದ ಮುಖರ್ಜಿಯವರು, ೧೮೭೦ನೇ ಡಿಶೆಂಬರ ೧೮ನೆಯ ತಾರೀಖಿನಲ್ಲಿ, ಬಾಲ್ಫೋರರಾದ ಗಡಂಗಿನಿಂದ ಲಂಡನದಲ್ಲಿ

---

೧ ಶ್ರೀ ಬಾಲಕೃಷ್ಣರವರ 'ಹಿಂದೂ ದೇಶಕ್ಕೂ ಇಂಗ್ಲೆಂಡಿಗೂ ಇರುವ ಸಂಬಂಧ ವಾಣಿಜ್ಯ' ಹತ್ತನೆಯ ಅಧ್ಯಾಯ.

೨. ಶ್ರೀ ವಿಲಿಯಂ ಡಿಗ್ಬಿಯವರ 'ವೈಭವ ಪಡೆದ ಬ್ರಿಟಿಷ್ ಇಂಡಿಯಾ' ೯೦ನೆಯ ಪುಟ.

ಇರುವ ಡೈರೆಕ್ಟರರ ಕಚೇರಿಗೆ ಬರೆದ ಕಾಗದದಿಂದ ಎತ್ತಿಬರೆಯುತ್ತ[೧] 'ಅನೇಕ ಮಂದಿ ಆಂಗ್ಲೇಯ ವರ್ತಕರೂ ಇತರರೂ ತಮ್ಮ ನೌಕೆಗಳನ್ನು ವರ್ಷ ಕ್ಕೊಮ್ಮೆ ಕಟ್ಟಿಸುತ್ತಿರುವರು. ಇಲ್ಲಿ ಹೇರಳವಾಗಿ ಅತ್ಯುತ್ತಮವಾಗಿ ಬೆಳೆದ ಮರವೂ, ಸಮುದ್ರತೀರದಲ್ಲಿ ಕಬ್ಬಿಣವೂ ಸಿಕ್ಕುತ್ತದೆ; ಕಬ್ಬಿಣದಿಂಡ ಯಾವ ವಿಧವಾದ ಮೊಳೆ, ಮರಡು, ಲಂಗರು ಇತ್ಯಾದಿಯೆಲ್ಲವನ್ನೂ ದೇಶೀಯರೇ ಬಹು ಜಾಣತನದಿಂದ ಮಾಡುತ್ತಾರೆ. ಇಲ್ಲಿ ಸಾಕಷ್ಟು ಮಂದಿ ನೌಕಾ ನಿರ್ಮಾಣ ನಿಪುಣರಿರುವರು; ಅವರು ಬಹಳ ಚನ್ನಾಗಿ ಕಟ್ಟುವರು; ಅಲ್ಲದೆ ಪ್ರಪಂಚದ ಯಾವ ಭಾಗದಲ್ಲಿಯೂ ನಾನು ಕಾಣದಿರುವಂತಹ ನಿಪುಣ ನಾವಿಕರಿರುವರು. ಹಡಗುಗಳಿಗೆ ಬೇಕಾದ ಹಗ್ಗ ಹುರಿ ಚಾಪೆ ಮುಂತಾ ದುವನ್ನೂ ಬಹಳ ಕೌಶಲ್ಯದಿಂದ ಮಾಡುವರು.' ಮೊನ್ನೆ ಮೊನ್ನೆ[೨] ೧೮೦೭ರ ವರೆಗೂ ಇಂಗ್ಲೆಂಡಿಗೆ ಬೇಕಾದ ಹಡಗುಗಳೂ, ಯುದ್ಧ ನೌಕೆಗಳೂ ಹಿಂದೂ ದೇಶದಲ್ಲಿಯೇ ಕಟ್ಟಲ್ಪಡುತ್ತಿದ್ದುವು. ಇಷ್ಟೇ ಅಲ್ಲದೆ ಹಿಂದೂದೇಶದ ನೌಕಾ ನಿರ್ಮಾಪಕರಿಂದಲೇ ಅದರ ರಚನಾ ನಿರೂಪಗಳನ್ನೂ, ನಿರ್ಮಾಣತಂತ್ರಗಳನ್ನೂ ಇಂಗ್ಲೆಂಡಿನವರು ಕಲಿತುಕೊಂಡರು.[೩]

ಸುಂದರ ಸೌಧಗಳೂ, ಕಾಲುವೆಗಳೂ, ಸಾರ್ವಜನಿಕ ರಸ್ತೆಗಳೂ ಇದೇ ಕಾಲದಲ್ಲಿ ನಿರ್ಮಾಣವಾದುದಾಗಿ, ಇಂದಿಗೂ ಅಚ್ಚಳಿಯದಿದ್ದು, ಆ ಕಾಲದ ಸಂಪತ್ತು ಸಮೃದ್ಧಿಯುತ ವೈಭವವನ್ನು ತೋರಿಸುತ್ತದೆ.

ದೇಶದ ಅನೇಕ ಭಾಗಗಳಲ್ಲಿ ಕ್ಷಾಮಡಾಮರಾದಿಗಳು ತಲೆದೋರಿ ಬಹಳ ನಾಶಪಡಿಸಿದುವೆಂಬುದೇನೋ ನಿಜವಾದರೂ ದೇಶದಾದ್ಯಂತವನ್ನೂ ಒಂದೇ ಬಾರಿಗೆ ಎಂದಿಗೂ ತೊಂದರೆಪಡಿಸಿರಲಿಲ್ಲ. ಇದಕ್ಕೆ ಮುಖ್ಯ ಕಾರಣ ವೆಂದರೆ ಅನಾವೃಷ್ಟಿಯಿಂದ ಬೆಳೆ ಬೆಳೆಯದೆ ಆಹಾರ ಸಾಮಗ್ರಿಯು ಕಡಿಮೆ ಯಾದುದಲ್ಲದೆ, ಜನರಲ್ಲಿ ಅಗತ್ಯ ವಸ್ತುಗಳನ್ನು ಕೊಳ್ಳುವ ಸಾಮರ್ಥ್ಯವಿಲ್ಲದೆ ಅಲ್ಲ. ಅದು ಸಹಜವಾಗಿ ತಟಸ್ಥವಾದ ದುರವಸ್ಥೆಯಲ್ಲದೆ ಆರ್ಥಿಕ ಪರಿಸ್ಥಿತಿ

---

೧. ಶ್ರೀ ರಾಧಾಕುಮುದ ಮುಖರ್ಜಿಯವರ 'ಭಾರತೀಯ ಇತಿಹಾಸ' ೨೩೩ನೆಯ ಪುಟ.

೨ ,, ೨೪೪ನೆಯ ಪುಟ.

೩ ,, ೨೫೦ನೆಯ ಪುಟ.

ಯಿಂದುಂಟಾದ ವ್ಯಸನವಲ್ಲ. ಆಗಿನ ಕಾಲದಲ್ಲಿ ಪ್ರಯಾಣ ಸೌಕರ್ಯಗಳು ನಿದಾನವಾಗಿಯೂ ದುಸ್ತರವಾಗಿಯೂ ಇದ್ದು ಸರಿಯಾದ ಸೌಲಭ್ಯಗಳನ್ನು ಒದಗಿಸದಿದ್ದುದರಿಂದ, ಸೌಕರ್ಯಗಳನ್ನು[೧] ಮಾಡುವುದು ಬಹುತೇಕ ಕಷ್ಟ ಸಾಧ್ಯವಾಗಿದ್ದಿತು.

ಆಗಾಗ ಕೆಲವು ಮಂದಿ ವಿದೇಶೀಯ ರಾಜರು ಭರತಖಂಡದ ಐಶ್ವರ್ಯದ ಮೇಲೆ ತಮ್ಮ ಅಸೂಯಾಪರ ದೃಷ್ಟಿಯನ್ನು ಬೀರಿ, ದೇಶದ ಮೇಲೆ ದಂಡೆತ್ತಿ ಬಂದು, ದೇವಾಲಯಗಳಲ್ಲಿಯೊ, ಅರಸರ ಅರಮನೆಗಳಲ್ಲಿಯೊ ಶೇಖರಿಸಿಟ್ಟಿದ್ದ ಐಶ್ವರ್ಯವನ್ನೆಲ್ಲ ಲೂಟಿಮಾಡಿಕೊಂಡು ಹೋಗುತ್ತಿದ್ದರು. ಸನ್ನಿವೇಶಗಳು, ಸಮಯ ಇದ್ದರೂ ದರೋಡೆಕಾರರು ಬಂದು ಸೂರೆ ಮಾಡಿಕೊಂಡು ಹೋಗುವುದು ಗತ್ಯಂತರವಿಲ್ಲದ ಕಾರ್ಯವಾಗಿದ್ದರೂ, ಆ ದೇಶದಲ್ಲಿ ನೆಲಸಿದ್ದ ರೈತಾಪಿ ಜನಾಂಗದವರೂ, ವೃತ್ತಿಕಾರರೂ ತಮ್ಮ ತಮ್ಮ ಕರ್ತವ್ಯಗಳನ್ನು ಮಾಡಿಕೊಳ್ಳುತ್ತ ಶಾಂತತೆಯಲ್ಲಿ ಜೀವನವನ್ನು ನಡೆಯಿಸುತ್ತಿದ್ದರು. ಎಲ್ಲ ಸಂದರ್ಭಗಳಲ್ಲಿಯೂ, ಯಾವ ದಂಡಯಾತ್ರೆಯಾದಾಗಲೂ, ಜನರ ಸುಖಸಂಪತ್ತಿನ ಉತ್ಪತ್ತಿಮೂಲವನ್ನು ಮಾತ್ರ ಸೂರೆಮಾಡದೆ ಪ್ರಜೆಗಳೆಲ್ಲರೂ ತಮ್ಮ ತಮ್ಮ ಸುಖಜೀವನ ಸಾಧನದಲ್ಲಿ ಉದ್ಯಮಿಸಲು ಸ್ವತಂತ್ರರಾಗಿಯೇ ಇರುವಂತಿದ್ದಿತು. ವಾಸ್ತವವಾಗಿಯೂ, ಯಾವ ರಾಷ್ಟ್ರದ ಸಂಪತ್ತಾಗಲಿ, ಸಾಮೂಹಿಕ ದೃಷ್ಟಿಯಿಂದ ನೋಡಲ್ಪಟ್ಟಾಗ (ಐಶ್ವರ್ಯ ಶೇಖರಣೆಯ ಮೇಲಲ್ಲದೆ ), ಜನಾಂಗದ ಉತ್ಪತ್ತಿಕ್ರಮದ ಮೇಲೆ ಆಧಾರಪಟ್ಟದ್ದೇ ಆದರೆ ಆಗ ಆ ಚಿಕ್ಕಪುಟ್ಟ ಒಳ ಹಾದಿಗಳಾವವೂ ಪ್ರಜಾಸೌಖ್ಯವನ್ನು ತೊಂದರೆಪಡಿಸಲಿಲ್ಲವೆಂದು ನಾವು ಧಾರಾಳವಾಗಿ ಹೇಳಬಹುದು. ವ್ಯವಸಾಯವೊಂದು ಪುಣ್ಯವೃತ್ತಿಯಾಗಿ ಪರಿಗಣಿಸಲ್ಪಟ್ಟಿತ್ತಾದುದರಿಂದ ಕ್ಷಾತ್ರವೀರರಾದ ರಾಜರು ವ್ಯವಸಾಯಿಕ ಕ್ಷೇತ್ರಗಳಿಗೆ ಯಾವ ವಿಧದಲ್ಲಿಯೂ ಹಾನಿಯಾಗದಂತೆ ದೂರವಿರುತ್ತಿದ್ದರು. ೧೭೩೯ರಲ್ಲಿ ನಾದಿರ್-ಷಹನು ನಡೆಸಿದ ಮುತ್ತಿಗೆಯಲ್ಲಿ ರಾಷ್ಟ್ರದ ಆರ್ಥಿಕ ಐಕ್ಯತೆಗೆ ಯಾವ ರೀತಿಯ ವಿನಾಶವನ್ನೂ ಉಂಟುಮಾಡದೆ ಅನುಭವಿಸಲಾದ ಅವಸ್ಥೆಗಳನ್ನು

೧ ಶ್ರೀ. ಎ. ಲೋಖಂಡೆಯವರ 'ಹಿಂದೂ ದೇಶದ ಕ್ಷಾಮಗಳ ಆರ್ಥಿಕ ಸ್ಥಿತಿಗತಿಗಳು ಮತ್ತು ಇತಿಹಾಸ' ಪುಟ ೨೦.

ತಂದೊಡ್ಡದೆ, ತಾತ್ಕಾಲಿಕ ದುರವಸ್ಥೆಯನ್ನು ತರಬಹುದಾಗಿದ್ದರೂ, ಯಾವು ದಕ್ಕೂ ಎಡೆಕೊಟ್ಟಿರಲಿಲ್ಲವೆಂದು ಸುಲಭವಾಗಿ ಹೇಳಬಹುದು. ಅಮೇರಿಕಾ ಖಂಡದಲ್ಲಿ ರಾಕ್‌ಫೆಲ್ಲರನಾಗಲಿ, ಫೋರ್ಡನಾಗಲಿ ತಮ್ಮ ಕುಬೇರತ್ವವನ್ನೆಲ್ಲಾ ಕಳೆದುಕೊಂಡರೂ ರಾಷ್ಟ್ರಕ್ಕೆ ಯಾವ ವಿಧವಾದ ನಷ್ಟವುಂಟಾಗಲಾರ ದೆಂದು ನಾವು ನಂಬಬಹುದು; ಆದರೆ ಹಾಗಲ್ಲದೆ ರೈತರ ಜೀವನಕ್ಷೇತ್ರ ವಾಗಲಿ, ಕೂಲಿಕಾರರ ವೃತ್ತಿಕ್ಷೇತ್ರದಲ್ಲಿರುವ ಉದ್ಯಮವಾಗಲಿ ಕಳಚಿ ಬಿದ್ದಾಗ ಆ ದುಃಖಮಯವಾದ ಪರ್ಯವಸಾನವನ್ನು ನೋಡಸದು ಮಾತ್ರ ಎಂದಿಗೂ ಆಗಲಾರದು. ಒಬ್ಬನನ್ನು ಮಾತ್ರ ಸುಲಿಗೆ ಮಾಡಿದರೆ ಅತ್ಯಲ್ಪ ಅಪಾಯವು ಮಾಡಿದಂತಾಗುವದೇ ವಿನಾ ಅವನು ತನ್ನ ಜೀವನವನ್ನು ನಡೆಸಿಕೊಳ್ಳಲು ಸ್ವತಂತ್ರನಾಗಿಯೂ ಸಮರ್ಥನಾಗಿಯೂ ಇದ್ದೇ ಇರು ವನು; ಹಾಗಲ್ಲದೆ ಒಬ್ಬ ಕಲಾಕುಶಲನನ್ನು ಸುಲಿಗೆಮಾಡಿ, ಅವನ ಕಣ್ಣು ಗಳನ್ನು ಕಿತ್ತು, ಅವನ ಕೈಗಳನ್ನು ಕತ್ತರಿಸಿದರೆ, ಅವನ ಜೀವನವನ್ನೇ ನಾಶಪಡಿಸಿದಂತಾಗುವುದು. ಪರದೇಶದ ದಂಡಯಾತ್ರೆಗಳೂ, ದೌರ್ಜನ್ಯದ ದೌಲತ್ತೂ ಅತ್ಯಲ್ಪಕಾಲ ಮಾತ್ರ ಜನರಿಗೆ ಗಾಬರಿಯನ್ನುಂಟು ಮಾಡಿತು; ಅಲ್ಲದೆ, ಬಹಳ ಸ್ವಲ್ಪ ಕಾಲದಲ್ಲಿಯೇ ಪುನಃ ಆ ಸೌಖ್ಯಮಯ ಜೀವನದ ಹಾದಿಗಳು ಸರಿಯಾಗಿ ಹೋಗುತ್ತಿದ್ದುವು.

ಒಳ್ಳೆಯದಕ್ಕೋ ಕೆಟ್ಟದಕ್ಕೋ ಕಂದಾಯದ ಉತ್ಪನ್ನವೆಲ್ಲವೂ ನಮ್ಮ ದೇಶದಲ್ಲಿಯೇ ವೆಚ್ಚ ಮಾಡಲ್ಪಡುತ್ತಿತ್ತು. ರಾಜಾಸ್ಥಾನಗಳಲ್ಲಿ ಆಗುತ್ತಿದ್ದ ತುಟ್ಟಿಯ ವೆಚ್ಚವೆಲ್ಲವೂ ಕಲಾವೃತ್ತಿ ಪೋಷಣೆಯ, ಅವುಗಳಿಗೆ ಕೊಡಬೇಕಾದ ಪ್ರೋತ್ಸಾಹದ ವಿನಿಯೋಗಕ್ಕಾಗಿ ಉಪಯೋಗಿಸಲ್ಪಟ್ಟು, ದೇಶದಲ್ಲಿ ಈ ಕಲಾವಿಶೇಷಗಳ ಮಹತ್ವ ಪರಿಣಾಮವನ್ನುಂಟು ಮಾಡುವ ಧ್ಯೇಯದಿಂದಲೇ ನಿಯಂತ್ರಿಸಲ್ಪಟ್ಟುವಾಗಿದ್ದುವು. ಪಂಡಿತರ ಹಾಗು ಕಲಾ ವಂತರ ಪೋಷಣೆಯಲ್ಲಿ ಪೌರ್ವಾತ್ಯ ರಾಜರೆಲ್ಲರೂ ಪ್ರಸಿದ್ಧಿ ಹೊಂದಿದವರು. ಅಖಂಡ ಸಾಮೂಹಿಕ ಉತ್ಪತ್ತಿಯಿಂದ ರಾಷ್ಟ್ರಕ್ಕೆ ರಾಷ್ಟ್ರವೇ ಲಾಭ ಹೊಂದುತ್ತಿದ್ದಿತು. ಅದು ಏನನ್ನು ಉತ್ಪತ್ತಿ ಮಾಡುತ್ತಿದ್ದಿತೋ ಅದನ್ನೇ ಯಾವ ವಿದೇಶೀಯನಿಗೂ ಅದರ ಯಾವ ಭಾಗವನ್ನೂ ಕೊಡದೆ ಉಪಯೋ ಗಿಸಿಕೊಳ್ಳುತ್ತಿದ್ದಿತು. ರಾಷ್ಟ್ರದ ಆಡಳಿತವು ದೇಶದ ತನ್ನ ಮಕ್ಕಳಿಂದಲೇ

ನಿಪುಣತೆಯಿಂದ ನಿರ್ವಹಿಸಲ್ಪಡುತ್ತಿದ್ದು, ಸಾವಿರಾರು ಮಂದಿ ದೇಶೀಯರಿಗೆ ಉದ್ಯೋಗಗಳನ್ನು ಒದಗಿಸಿಕೊಡುತ್ತ, ವಿದ್ಯಾವಂತರಲ್ಲಿ ಅತ್ಯಂತ ಮೇಧಾವಿಗಳಾದವರಿಗೆ ಅಧಿಕಾರ ಸೂತ್ರಗಳು ಸಿಗುವಂತಿದ್ದಿತು.

ಸ್ಥಳೀಯ ವಿದ್ಯಮಾನಗಳನ್ನೂ, ಕಂದಾಯ ಕೊಡುವವನ ಯೋಗ್ಯತೆಯನ್ನೂ ಕಣ್ಣಾರೆ ಕಂಡು ತಿಳಿದುಕೊಂಡಿರುವ ಗ್ರಾಮಪಂಚಾಯತಿಗಳಿಂದಲೇ ಗ್ರಾಮದ ಜಮೀನುಗಳು ತೆರಿಗೆ ವಿಧಿಸಲ್ಪಡುತ್ತಿದ್ದುವು. ಕಂದಾಯದ ದರದ ಪ್ರಮಾಣವು ಹೆಚ್ಚಿದ್ದಂತೆ ಕಂಡುಬಂದರೂ, ಸರಕಾರದಲ್ಲಿರುವ ಮಾನವ ಜೀವನದ ಮೂಲತತ್ವವೂ, ಅದರೊಡನಿರುವ ವ್ಯೆಯುಕ್ತಿಕ ಸಂಬಂಧವೂ, ಅನೇಕ ಸಂದರ್ಭಗಳಲ್ಲಿ ಸಹಾಯಕ್ಕೂ ಸೌಲಭ್ಯಕ್ಕೂ ದಾರಿಯಾಗಿದ್ದಿತು. ಬೆಳೆದ ಬೆಳೆಯ ಆಧಾರದ ಮೇಲೆ ಕಂದಾಯವು ವಿಧಿಸಲ್ಪಟ್ಟಿದ್ದುದರಿಂದ ಸಪ್ರಮಾಣವಾಗಿದ್ದಿತು. ರೈತರಿಗೆ ಕಂದಾಯವನ್ನು ನಾಣ್ಯರೂಪವಾಗಿಯಾಗಲಿ, ದವಸರೂಪವಾಗಿಯಾಗಲಿ ಸಲ್ಲಿಸುವ ಸ್ವಾತಂತ್ರ್ಯವಿದ್ದಿತು; ತಮ್ಮ ಆಸ್ತಿ ಪಾಸ್ತಿಗಳನ್ನು ಸುರಕ್ಷಿತವಾಗಿ ಸಂತಾನ ಪರಂಪರೆಯಾಗಿ ಅನುಭವಿಸುವುದಕ್ಕೆ ಅನುಕೂಲವಾದ ಎಲ್ಲ ರಕ್ಷಣೆಗಳನ್ನೂ ಒದಗಿಸಿಕೊಡಲಾಗುತ್ತಿತ್ತು. ರೈತರಿಗೆಲ್ಲರಿಗೂ, ಇತರರಿಗೂ ಸಹ ಅನಾವೃಷ್ಟಿಯಿಂದ ಕ್ಷಾಮಡಾಮರಾದಿಗಳು ಬಂದಾಗ ಬೇಕಾದ ದವಸಧಾನ್ಯಗಳ ಸಂಗ್ರಹವು[೧] ಇರುತ್ತಿತ್ತು. ಸಂರಕ್ಷಣೆಗಾಗಿ ಕೆಲವು ಭಾಗವನ್ನು ತೆಗೆದಿಡದೆ ಭೂಮಿಯಲ್ಲಿ ಬೆಳೆದ ಉತ್ಪತ್ತಿಯನ್ನೆಲ್ಲ ಸಂಪೂರ್ಣವಾಗಿ ತೊಳೆದುಹಾಕುತ್ತಿರಲಿಲ್ಲ.

ಪ್ರತಿಯೊಂದು ಹಳ್ಳಿಯಲ್ಲಿಯೂ ಇನಾಮು ಜಮೀನುಗಳಿಂದ ನಡೆಯಿಸಲ್ಪಡುತ್ತಿದ್ದ ಶಾಲೆಗಳಿದ್ದುವು;[೨] ಸ್ಥಳೀಯ ಆಡಳಿತದಲ್ಲಿರಬೇಕಾದ ಪ್ರತಿಯೊಂದು ವಿಭಾಗ[೩]ದಲ್ಲಿಯೂ ತನ್ನವರೇ ಆದ ಅಧಿಕಾರಿಗಳನ್ನು

---

೧ ಶ್ರೀ ಎ. ಲೊವಡೇರವರ 'ಹಿಂದೂ ದೇಶದ ಕ್ಷಾಮಗಳ ಆರ್ಥಿಕ ಪರಿಸ್ಥಿತಿ ಮತ್ತು ಇತಿಹಾಸ' ಪುಟ ೨೧.

೨ ಶ್ರೀ ಜೆ. ಮತ್ತಾಯಿಯವರ 'ಬ್ರಿಟಿಷ್ ಹಿಂದೂಸ್ತಾನದಲ್ಲಿ ಗ್ರಾಮಾಡಳಿತ' ಎರಡನೆಯ ಅಧ್ಯಾಯ.

೩ ,, ,, ಪುಟ ೧೫.

ಪಡೆದು, ಆದೇ ಒಂದು ಪುಟ್ಟ ಪ್ರಜಾಸತ್ತಾತ್ಮಕ ಕೇಂದ್ರವಾಗಿ ಸ್ಥಾಪನೆಯಾಗಿದ್ದಿತು.

ಐರೋಪ್ಯ ಪ್ರವಾಸಿಕರು ಮತ್ತು ಪರಿಶೀಲನಾವ್ಯಕ್ತಿಗಳು ಆ ಕಾಲದ ಪರಿಸ್ಥಿತಿಯನ್ನು ಕುರಿತು ವಿವರಿಸಿರುವುದನ್ನು ನೋಡಿದರೆ, ದೇಶದ ಉತ್ತರ, ದಕ್ಷಿಣ, ಪೂರ್ವ, ಪಶ್ಚಿಮ ಭಾಗಗಳಲ್ಲಿ ೧೮ನೆಯ ಶತಮಾನದ ಅಂತ್ಯ ಭಾಗದಲ್ಲಿ ದೇಶವು ಪಡೆದಿದ್ದ ಅಭಿವೃದ್ಧಿ ಸ್ಥಿತಿಯ ಚಿತ್ರವು ಚೆನ್ನಾಗಿ ಮನಗಾಣುವುದು.

ಭರತಪುರದ ಸಂಸ್ಥಾನದ ವಿಚಾರವಾಗಿ ತನ್ನ ಪತ್ರಿಕೆಯಲ್ಲಿ ಬಿಷಪ್ ಹೆಬರನು ವಿವರಿಸಿ ಬರೆದಿದ್ದಾನೆ: 'ಈ ಪ್ರದೇಶವು[೧] ಹಿಂದೂ ದೇಶದಲ್ಲಿ ನಾನು ನೋಡಿರುವ ಇತರ ಎಲ್ಲ ಪ್ರದೇಶಗಳಿಗಿಂತಲೂ ಸರಿಯಾಗಿ ವ್ಯವಸ್ಥಿತವಾದ ನೀರಾವರೀ ಯೋಜನೆಯಿಂದಲೂ, ವ್ಯವಸಾಯ ಕ್ರಮದಿಂದಲೂ ಅನುಕೂಲವಾಗಿದೆ. ಜಮೀನಿನಲ್ಲಿ ನಿಂತಿದ್ದ ಬೆಳೆಯು ಹಸಿವು ನೀರಡಿಕೆಯನ್ನು ಹಿಂಗಿಸುವಂತಿದ್ದಿತು. ಹತ್ತಿಯ ಬೆಳೆಯೂ ಸಹ ಹಾಗೆಯೇ ಬಹಳ ಫಲವತ್ತಾಗಿದ್ದಿತು. ಅಲ್ಲಲ್ಲಿ ಕೆಲವು ಸಕ್ಕರೆಯ ಕಾರಖಾನೆಗಳೂ, ಆಗಲೇ ಕತ್ತರಿಸುತ್ತಿದ್ದ ಕಬ್ಬಿನ ಗದ್ದೆಗಳೂ ದೇಶದ ಸಂಪತ್ತಿನ ಸತ್ಯ ನಿದರ್ಶನಗಳಾಗಿದ್ದುವು. ಜನಸಂಖ್ಯೆಯೇನೂ ಹೆಚ್ಚಿಲ್ಲದಿದ್ದರೂ, ಹಳ್ಳಿಗಳೆಲ್ಲವೂ ಸುವ್ಯವಸ್ಥಿತ ರೀತಿಯಲ್ಲಿ ಸರಿಪಟ್ಟು ಉತ್ತಮ ರೀತಿಯಲ್ಲಿದ್ದವು. ರಜಪುತಾನವಲ್ಲದೆ ಇತರ ಕಂಪನಿಯ ಪ್ರದೇಶಗಳಲ್ಲಿ ನಾನು ನೋಡಿದುದಕ್ಕಿಂತಲೂ ಅತ್ಯುತ್ತಮ ರೀತಿಯಲ್ಲಿ ಅಲ್ಲಿಯ ವೃತ್ತಿಜೀವನಚಿತ್ರವು ಕಣ್ಣುಗಳಿಗೆ ಆನಂದವನ್ನು ಬೀರುತ್ತಿದ್ದಿತು; ಕೆಲವು ದೇಶೀಯ ಸಂಸ್ಥಾನಗಳಿಗಿಂತಲೂ ಭರತಪುರದ ಮಹಾರಾಜನು ಪ್ರಜಾಪ್ರೀತಿಪರಾಯಣನೂ, ಪ್ರಜಾಕ್ಷೇಮಹಿತೈಷಿಯೂ, ಆದರ್ಶ ಮಹಾರಾಜನೂ ಆಗಿರುವನೆಂದೂ, ಬ್ರಿಟಿಷ್ ಪ್ರಾಂತ್ಯಗಳಲ್ಲಿ ನಾವು ಕೈಕೊಂಡ ಆಡಳಿತ ಪದ್ಧತಿಯು ದೇಶದ ಸುಖಸಾಧನಕ್ಕೆ ಕೇವಲ ಅನನುಕೂಲವಾಗಿದ್ದಿತೆಂದೂ ನಾನು ನಂಬಬೇಕಾಯಿತು.'

ಮತ್ತೊಬ್ಬ ವೀಕ್ಷಕರಾದ ಲೆಫ್ಟಿನೆಂಟ್ ಕರ್ನಲ್ ಮೂರರು, ದಕ್ಷಿಣ

೧ ಶ್ರೀ. ಬಿಷಪ್ ಹೆಬರನ ಪತ್ರಿಕೆಯ ಎರಡನೆಯ ಸಂಪುಟ, ೧೭ನೆಯ ಪುಟ

ಹಿಂದುಸ್ಥಾನದ ಮೈಸೂರ ದೇಶದಲ್ಲಿ ಮುಸಲ್ಮಾನ ಅರಸನಾದ ಟೀಪೂ ಸುಲ್ತಾನನ ಆಡಳಿತವನ್ನು ಸಮರ್ಥಿಸಿದ್ದಾರೆ : ' ಯಾರೊಬ್ಬ ಪ್ರವಾಸಿಕನೇ ಆಗಲಿ [1] ಪರದೇಶದಲ್ಲಿ ಪ್ರವಾಸ ಮಾಡುತ್ತಿರುವಾಗ, ದೇಶವು ಅತ್ಯುತ್ತಮ ರೀತಿಯ ವ್ಯವಸಾಯ ಜೀವನದಿಂದಲೂ, ವೃತ್ತಿಪರರಾದ ಪ್ರಜೆಗಳಿಂದ ನಿಬಿಡವಾಗಿಯೂ, ನಗರಗಳೆಲ್ಲವೂ ಸರಿಯಾಗಿ ಏರ್ಪಟ್ಟುವಾಗಿಯೂ, ವ್ಯಾಪಾರವು ಪ್ರಪಂಚದ ಎಲ್ಲ ಕಡೆಗೂ ವಿಸ್ತರಿಸಿದುದಾಗಿಯೂ, ಪಟ್ಟಣಗಳೆಲ್ಲವೂ ಬೆಳೆಯುತ್ತ ಅಭಿವೃದ್ಧಿ ಸ್ಥಿತಿಯಲ್ಲಿದ್ದುದಾಗಿಯೂ, ಪ್ರಜೆಗಳ ಸೌಖ್ಯವನ್ನು ಸೂಚಿಸುತ್ತಿರುವಾಗ, ಆಗ ಆತನು ಅಲ್ಲಿನ ರಾಜ್ಯಭಾರಕ್ರಮವು ಪ್ರಜೆಗಳಿಗೆ ಎಷ್ಟು ಸುಖದಾಯಕವಾಗಿದ್ದಿತೆಂದು ಸಹಜವಾಗಿ ತಿಳಿಯುವನೋ ಆಲೋಚಿಸಿ. ಇತರ ಸಾರ್ವಭೌಮರ ಆಡಳಿತದಲ್ಲಿರುವಂತೆಯೇ ಅದಕ್ಕಿಂತಲೂ ಮಿಗಿಲಾಗಿಯೇ ಆತನ ಪ್ರಜೆಗಳು ಎಷ್ಟು ಸುಖದಿಂದಿದ್ದರೆಂಬುದನ್ನು ನಾವು ಆಲೋಚಿಸಲು ಅನೇಕ ಕಾರಣಗಳಿರುತ್ತವೆ. ಟೀಪೂವಿನ ಶತ್ರುಗಳೇ ಅಧಿಕಾರದಲ್ಲಿದ್ದು ಆತನ ಮೇಲೆ ಯಾವ ರೀತಿಯ ದೂರಾಗಲೀ ಟೀಕೆಯಾಗಲಿ ಕೇಳಬರುವಂತಿಲ್ಲ. ಆತನ ಗುಣಗಳನ್ನು ಕುರಿತು ಯಾವ ವಿಧದ ದೂಷಣೆಯನ್ನು ಆತನ ಶತೃಗಳೇ ಸಂತೋಷದಿಂದ ಕೇಳಿದರೂ ಅಂತ ಹುದಕ್ಕೆ ಯಾವ ಅವಕಾಶವೂ ಅನುಮಾನವೂ ಇರಲಿಲ್ಲ.'

ಇನ್ನು ಪೂರ್ವ ಭಾಗದ ಕಡೆಗೆ ನೋಡಿದರೆ, ಹಾಲನೆಲ್ಲನು [2] ವರ್ಣಿಸಿದ ಬಂಗಾಳದ ಪರಿಸ್ಥಿತಿಯು ಹೀಗೆ ಕಂಡುಬರುವುದು: ' ಇಲ್ಲಿ ಪ್ರಜೆಗಳ ಸ್ವಾತಂತ್ರ್ಯ ಹಕ್ಕು ಬಾಧ್ಯತೆಗಳ ಮತ್ತು ಆಸ್ತಿಪಾಸ್ತಿಗಳ ವಿಚಾರವಾಗಿ ಯಾವ ತೊಂದರೆಯೂ ಇರಲಿಲ್ಲ. ವ್ಯಾಪಾರಕ್ಕಾಗಿಯಾಗಲಿ ಅಥವಾ ಬೇರಾವ ಕೆಲಸಕ್ಕಾಗಿಯಾಗಲಿ ಬಂದ ಯಾವ ಪ್ರವಾಸಿಕನೇ ಆಗಲಿ ಕೂಡಲೆ ಸರಕಾರದ ಸಂರಕ್ಷಣೆಗೊಳಪಡುತ್ತಾನಲ್ಲದೆ, ಅವನಿಗೆ ಯಾವ ವೆಚ್ಚವೂ ಇಲ್ಲದೆ, ಒಂದು ಘಟ್ಟದಿಂದ ಮತ್ತೊಂದು ಘಟ್ಟಕ್ಕೆ ಸರಿಯಾಗಿ ಸೇರುವಂತೆ

೧. ಮೂರರ ' ಟೀಪೂಸುಲ್ತಾನನೊಡನೆ ನಡೆಸಿದ ಯುದ್ಧದ ಚರಿತ್ರೆ ' ಯಿಂದ ಪುಟ ೨೦೧ ( ದಿವಂಗತ ಲಾಲಾಲಜಪತರಾಯರ ' ಸುಧಾರಣಾ ವರದಿ ' ಯಿಂದ ಉಧೃತವಾದುದು.

೨. ಶ್ರೀ ಲಜಪತರಾಯರ ' ಹಿಂದೂದೇಶಕ್ಕೆ ಇಂಗ್ಲೆಂಡಿನ ಸಾಲ ' ಪುಟ ೨೫.

ಸಂರಕ್ಷ್ಣೆ ಕರಿರುತ್ತಾರೆ.' ಅಲ್ಲದೆ ಸಿರಿವಂತವಾದ ಡಾಕಾ ಪ್ರದೇಶವೆಲ್ಲವೂ ಸಂಪೂರ್ಣವಾಗಿ ವ್ಯವಸಾಯದ ಬೀಡಾಗಿದ್ದಿತು. ನ್ಯಾಯವು ನಿಷ್ಪಕ್ಷಪಾತವಾಗಿ ನಿಯಂತ್ರಿತವಾಗುತ್ತಿದ್ದಿತು. ಜಸವಂತರಾಯನು ತನ್ನ ಕರ್ತವ್ಯದಲ್ಲಿ ಪರಿಶುದ್ಧಾತ್ಮದಿಂದಲೂ, ಸತ್ಯದಿಂದಲೂ, ಅವಿರಾಮವಾದ ಚಟುವಟಿಕೆಯಿಂದಲೂ ಬಲ್ಲಿದನಾಗಿ, ತನ್ನ ಪ್ರಜೆಗಳಿಗೆ ಸುಖಶಾಂತಿ ಸಮಾಧಾನಗಳನ್ನು ಕೊಡುತ್ತ, ಸರಕಾರದ ಆಡಳಿತವನ್ನು ನಡೆಯಿಸುವುದರಲ್ಲಿ ವಿದ್ಯಾವಂತನಾಗಿಯೂ ಇದ್ದನು. ಆತನು ದವಸ ಧಾನ್ಯದ ಮೇಲಿರುವ ಸುಂಕಸಾರಿಗೆಗಳನ್ನೂ ಗುತ್ತಿಗೆಗಳನ್ನೂ ಕಿತ್ತೊಗೆದಿದ್ದನು.'

ಪಶ್ಚಿಮ ಭಾಗದ ವಿಚಾರವನ್ನು ಕುರಿತು, ಅದರಲ್ಲಿಯೂ ಮಹಾರಾಷ್ಟ್ರದೇಶವನ್ನು ವರ್ಣಿಸುತ್ತ, ಪೆರಾನರವರು ಹೀಗೆ ಹೇಳಿರುವರು: 'ನಾನು ಈ ಮಹಾರಾಷ್ಟ್ರದೇಶವನ್ನು ಪ್ರವೇಶಮಾಡಿದ ಕೂಡಲೆ, ಪ್ರಕೃತಿಯ ಪರಿಸ್ಥಿತಿಯೇ ವ್ಯತ್ಯಾಸವಾಗದೆ, ಯುದ್ಧವಾಗಲಿ ದುರವಸ್ಥೆಯಾಗಲಿ ಯಾವುದರ ಅರಿವೇ ಇಲ್ಲದಿರುವ ಆ ಸ್ವರ್ಣಯುಗದ ಸೌಖ್ಯ ಸರಲತೆಗಳ ಮಧ್ಯೆ ನಾನಿದ್ದಂತೆ ಕಂಡುಬಂದಿತು. ಪ್ರಜೆಗಳೆಲ್ಲರೂ ಆನಂದ ಪುರುಷರಾಗಿ, ಸಂತೋಷಚಿತ್ತರಾಗಿ, ಚತುರರಾಗಿ, ಆರೋಗ್ಯ ದೃಢಕಾಯರಾಗಿ, ಅತಿಥಿ ಸತ್ಕಾರಪ್ರಿಯರಾಗಿ, ಸಾರ್ವಜನಿಕವಾಗಿ ಎಲ್ಲರೂ ಸಕಲ ಸದ್ಗುಣಭರಿತರಾಗಿದ್ದರು; ಸ್ನೇಹಿತರೇ ಆಗಲಿ, ನೆರಹೊರೆಯವರೇ ಆಗಲಿ, ಪರಸ್ಥಳೀಕರೇ ಆಗಲಿ, ಎಲ್ಲರಿಗೂ ಪ್ರತಿಯೊಂದು ಮನೆಯೂ ಪ್ರತಿಯೊಂದು ವಸ್ತುವೂ ಸ್ವತಂತ್ರವಾದುದಾಗಿದ್ದಿತು.'

ಹತ್ತೊಂಭತ್ತನೆಯ ಶತಮಾನದ ಆದಿ ಭಾಗದಲ್ಲಿ ದೇಶವು ಎಷ್ಟು ಸಮೃದ್ಧಿಯಿಂದ ತುಂಬಿ ತುಳುಕುತ್ತಿದ್ದಿತೆಂಬ ಸಂತೋಷಪೂರಿತ ಚಿತ್ರವನ್ನು ನೋಡಿ, ಮುಂದಿನ ಶತಮಾನದ ಆದಿ ಭಾಗದಲ್ಲಿ ಹಿಂದೂದೇಶದ ಪರಿಸ್ಥಿತಿಯು ಯಾವ ರೀತಿ ಇತ್ತೆಂಬುದನ್ನು ನಾವು ಪರಿಶೀಲಿಸೋಣ.

---

## ೩. ೨೦ನೆಯ ಶತಮಾನದ ಭಾರತ

ಕೆಲವು ಮಂದಿ ಐರೋಪ್ಯ ಪ್ರವಾಸಿಕರು ತಮ್ಮ ಅನುಭವಗಳನ್ನು ಕುರಿತು ಬರೆದ ಸಾಕ್ಷಿ ಸಾಹಿತ್ಯಗಳನ್ನು ಮತ್ತೊಮ್ಮೆ ಪರಿಶೀಲಿಸೋಣ. ಪ್ರಪಂಚದಲ್ಲೆಲ್ಲ ಸುಪ್ರಸಿದ್ಧ ಗಣ್ಯವ್ಯಕ್ತಿ ಇಂಗ್ಲೆಂಡಿನ ಪ್ರಧಾನಾಮಾತ್ಯರಾದ ಶ್ರೀ. ಜೆ. ರಾಂಸೆ ಮ್ಯಾಕ್ಡೊನಾಲ್ಡರವರು 'ಆದೇಶದಲ್ಲಿ ಎಷ್ಟು ದಿನ[1] ಪ್ರಯಾಣ ಮಾಡಿದರೂ, ತೆಳ್ಳಗೆ ಒಣಗಿ ಹೋಗಿರುವ ದೇಹಗಳುಳ್ಳವರು ಹಗಲಿರುಳೂ ದುಡಿದು ದಣಿದು, ಬಳಲಿ, ಬೇಸತ್ತು ಬೆಂಡಾಗುತ್ತಿರುವವರನ್ನೇ ಕಾಣುವೆ ವಲ್ಲದೆ ಮತ್ತೇನನ್ನೂ ಕಾಣುವುದಿಲ್ಲ. ಭಾರತವು ಬಡತನದಿಂದ ಬಳಲುತ್ತಿರುವವರ ನೆಲೆಮನೆಯಾಗಿದೆ. ಅಲ್ಲಿಯ ದಾರಿದ್ರ್ಯವು ಪರಿಪೂರ್ಣ ಮಾನವ ಕೃಪಾದೃಷ್ಟಿಯ ಆಧಾರದ ಮೇಲೆ ನಿಂತುಹೋಗಿರುವಂತೆ ನನ್ನ ಮನಸ್ಸಿನಲ್ಲಿ ಮುಂದಟ್ಟಾಗಿರುವುದು' ಎಂದು ನುಡಿದಿದ್ದಾರೆ. ಮತ್ತೊಮ್ಮೆ ಅವರು ಅದನ್ನೇ ಸಮರ್ಥಿಸುತ್ತ 'ಹಿಂದೂದೇಶದ ದಾರಿದ್ರ್ಯವೊಂದು[2] ಅಭಿಪ್ರಾಯವಲ್ಲ; ಅದು ವಾಸ್ತವವಾದ ವಿಷಯ' ಎಂದು ಘೋಷಿಸಿರುವರು.

ಡೇಲಿ ನ್ಯೂಜೆಂಬ ಪತ್ರಿಕೆಯಲ್ಲಿ ಡಾಕ್ಟರ ಜೋಸಯ್ಯ ಓಲ್ಡ್‌ಫೀಲ್ಡನು 'ನಾನು ಅದೇ ದೇಶಕ್ಕೆ ಹೋಗಿ, ಹಿಂದೂದೇಶದ ಸಮಸ್ಯೆಗಳನ್ನು ಚೆನ್ನಾಗಿ ಪರಿಶೀಲಿಸಿ ತಿಳಿದುಕೊಳ್ಳಲು ಹೋಗಿದ್ದವನು, ಈಗ ತಾನೆ ಹಿಂದಿರುಗಿ ಬಂದಿರುವೆನು. [3] ಹಳ್ಳಿ ಹಳ್ಳಿಯಲ್ಲಿಯೂ ಇರುವ ಭೀಕರ ದುಸ್ಥಿತಿಯನ್ನೂ, ಗಂಡಸರಿಗೆ ಮಾತ್ರವಲ್ಲದೆ ಹೆಂಗಸರು ಮಕ್ಕಳಿಗೆ ಬಂದಿರುವ, ಅರಹೊಟ್ಟೆಗೂ ಇಲ್ಲದೆ ಅನಸ್ಥೆಪಡುತ್ತಿರುವ ನಿತ್ಯ ಜೀವನದ ದುಃಖಮಯ ಹೊಯ್ದಾಟದ ಶೋಚನೀಯ ಸ್ಥಿತಿಯನ್ನೂ, ಅದರ ಭೀಷಣ ಸ್ವರೂಪವನ್ನೂ ನಮ್ಮ ವಾಚಕರ ಮುಂದೆ ನಾನು ಯಾವ ಬಾಯಿಂದ ಹೇಳಲಿ' ಎಂದು ವಿವರಿಸಿದ್ದಾರೆ.

---

೧. ಶ್ರೀ ರಾಂಸೆ ಮ್ಯಾಕ್ಡೊನಾಲ್ಡರವರ 'ಹಿಂದೂದೇಶವು ಜಾಗೃತಗೊಳ್ಳಲಿ' ಎಂಬ ಪುಸ್ತಕದಲ್ಲಿ ೧೪೦ ನೆಯ ಪುಟ.

೨. ,, ,, ,, ,, ೧೫೯ನೆಯ ಪುಟ

೩. ಶ್ರೀ. ವಿಲಿಯಂ ಡಿಗ್ಬಿಯವರ 'ಹಿಂದೂದೇಶದ ವಿನಾಶ' ಎಂಬ ಗ್ರಂಥದಿಂದ ಪುಟ ೧೫೯

'ನಾನು ಇಂಗ್ಲಿಷಹಳ್ಳಿಗಳ ಬಡತನವನ್ನು ಕಂಡಿದ್ದೇನೆ; ಲಂಡನ್ನಿನ ಹೊಲಗೇರಿಗಳ ಹಾಳು ಮನೆಗಳನ್ನು (ಆ ಹಾಳು ಮನೆಗಳಲ್ಲಿರುವ ದಾರಿದ್ರ್ಯವು ಧರ್ಮೋಪದೇಶಕನಿಗಿಂತಲೂ ಡಾಕ್ಟರಿಗೆ ಚೆನ್ನಾಗಿ ತಿಳಿದಿರುವದು) ನಾನು ಕಂಡಿರುವೆನು; ಆದರೆ ಧೈರ್ಯಶಾಲಿಗಳೂ, ಸತ್ಯಪ್ರಿಯರೂ, ಕಷ್ಟಸಹಿಷ್ಣುಗಳೂ, ಮಿತವ್ಯಯಿಗಳೂ ಆದ ಭಾರತೀಯ ಜನರು, ದಿನದಿನವೂ ದುಡಿಯುತ್ತ, ಒಂದು ರೊಟ್ಟಿಯನ್ನೂ, ರೊಟ್ಟಿಯು ಗಂಟಲೊಳಕ್ಕೆ ಹೋಗುವಂತೆ ಮಾಡಲು ಕೈತುಂಬ ವ್ಯಂಜನವನ್ನೂ, ಮಜ್ಜಿಗೆಯನ್ನೂ, ದಿನಕ್ಕೆರಡು ಬಾರಿ ತಿಂದುಕೊಂಡಿರುವವರ ದೃಶ್ಯವನ್ನು ನೋಡಿದಾಗ ನನ್ನ ಮನಸ್ಸಿಗುಂಟಾದ ದುಃಖಕ್ಕೂ, ಭೀತಿಗೂ ಮೀರಿದುದನ್ನು ನಾನೆಲ್ಲಿಯೂ ನೋಡಿಲ್ಲ.

'ಈಗ, ಅಂದರೆ ೧೯೦೦ ರಲ್ಲಿ, ಹಿಂದೂದೇಶದಲ್ಲಿ ನಿರ್ಧಾರವಾದ ಕ್ಷಾಮವಿದೆಯೆಂದು ತಿಳಿದುಬಂದಿಲ್ಲ. ನಾನು ಅನೇಕಾನೇಕ ಹಳ್ಳಿಗಳಿಗೆ ಹೋಗಿದ್ದೇನೆ; ಅನೇಕ ಮನೆಗಳನ್ನು ಹೊಕ್ಕು ನೋಡಿದ್ದೇನೆ; ಅಲ್ಲಿರುವ ದವಸ ಧಾನ್ಯವನ್ನು ಶೇಖರಿಸುವ ಕಣಜಗಳೂ ಬರಿದಾಗಿಯೋ ಇಲ್ಲವೊ ಬರಿದಾಗುವ ಸ್ಥಿತಿಯಲ್ಲಿಯೋ ಇದ್ದುದನ್ನು ಕಂಡೆನು.'

'ಇದರಿಂದ ನಮಗೆ ತಿಳಿದು ಬರುವದೇನು? ಅವರ ಸುಗ್ಗಿಯೆಲ್ಲವೂ ಆಗಿ ಬಂದ ಬೆಳೆಯನ್ನೆಲ್ಲಾ ಕಂದಾಯ ಕೊಡುವದಕ್ಕಾಗಿ ಮಾರಾಟ ಮಾಡಿರುವದರಿಂದ, ಒಂದೆರಡು ತಿಂಗಳೊಳಗಾಗಿ ಅವರಿಗೆ ತಿನ್ನಲು ಏನೂ ಉಳಿಯುವದೇ ಇಲ್ಲ.'

ಲಂಡನ ಮಿಷನರಿ ಸೊಸೈಟಿಯ ರೆವರೆಂಡ ಜೆ. ನೌಲ್ಸರವರು[೧] 'ನನ್ನ ಈ ಧರ್ಮ ಪ್ರಚಾರ ಕಾರ್ಯದ ಅನುಭವದಲ್ಲಿ, ಸುಮಾರು ೩೦೦ ಮಂದಿ ಜನರ ಪರಿಷತ್ತಿನಲ್ಲಿ ಎಲ್ಲರ ಸಂಪಾದನೆಗಳನ್ನೂ ಜಾಗರೂಕತೆಯಿಂದ ವಿಮರ್ಶಿಸಿದಾಗ, ಒಬ್ಬೊಬ್ಬನ ಸರಾಸರಿ ದಿನದ ಸಂಪಾದನೆಯು ತಲೆಗೊಂದು ಫಾರ್ದಿಂಗಿಗಿಂತಲೂ ಕಡಿಮೆಯಾಗಿದ್ದಂತೆ ಕಂಡುಬಂದಿತು. ಅವರು ಜೀವಿಸುತ್ತಿರಲಿಲ್ಲ; ಅವರು ತಮ್ಮ ಬಾಳನ್ನು ತಳ್ಳಿಕೊಂಡು ಹೋಗುತ್ತಿದ್ದರು' ಎಂದು ಸಾರಿದ್ದಾರೆ.

---

೧. ಶ್ರೀ ವಿಲಿಯಂ ಡಿಗ್ಬಿಯವರ 'ವೈಭವಭರಿತ ಬ್ರಿಟಿಷ ಇಂಡಿಯಾ' ಪುಟ ೧೦೬

ಹಿಂದೂದೇಶದ ದಾರಿದ್ರ್ಯವನ್ನು ಕುರಿತು, ಲಂಡನ್ನಿನ ಪ್ರೊಫೆಸರ್ ಗಿಲ್ಬರ್ಟಸ್ಲೇಟರರವರು 'ಅದು ಭಯಂಕರ ವಿಚಾರ'ವೆಂದು ಹೇಳಿರುವರು.[೧]

ಮೊನ್ನೆಮೊನ್ನೆ ೧೯೨೭ರಲ್ಲಿ ಡಾಕ್ಟರ ರೂದರ್‌ಫೋರ್ಡ್‌ನು ವಿವರಿಸುತ್ತಾ, 'ಎಲ್ಲ ಕಡೆಗಳಲ್ಲಿಯೂ ಆ ಜೀವನಸಮಸ್ಯೆಯು ಮಹಾ ಘೋರವಾಗಿದ್ದಿತು,' ಎಂದು ಹೇಳಿ, ನಿರುದ್ಯೋಗವನ್ನೂ ಕುಂದುಕೊರತೆಗಳನ್ನೂ ಚಿತ್ರಿಸಿದ ಮೇಲೆ, 'ನಾನು ಬ್ರಿಟಿಷ್ ಪ್ರಜೆಯಾಗಿದ್ದುದರಿಂದ ನನ್ನ ವಿಶೇಷ ಭೀತಿಯೂ ದುಃಖವೂ ಅಲ್ಲಿನ ಪರಿಸ್ಥಿತಿಗಳನ್ನು ಪ್ರತ್ಯಕ್ಷ ನೋಡಿದಾಗ, ಅವರನ್ನು ನಾವಧಾನದಿಂದ ಸಂಕಟಕ್ಕೀಡುಮಾಡಿ ಸಾಯಿಸುತ್ತಲಿರುವ ಅವರ ದೈಹಿಕ ಪರಿಸ್ಥಿತಿಗೆ ಪ್ರಥಮತಃ ನಾವೇ ಜವಾಬ್ದಾರರೆಂದು ನನಗೆ ಚೆನ್ನಾಗಿ ಮನಗಂಡಿತು; ಅಲ್ಲದೆ ಮಹತ್ವಪೂರಿತ ನೀರಾವರೀ ಯೋಜನೆಗಳನ್ನು ಏರ್ಪಡಿಸಿ, ವ್ಯವಸಾಯದ ವ್ಯವಸ್ಥೆಯನ್ನು ಹೆಚ್ಚಿಸುವುದಕ್ಕೂ, ಭೂಕಂದಾಯವನ್ನು ಕಡಿಮೆ ಮಾಡುವುದಕ್ಕೂ ಏರ್ಪಡಿಸಿ, ಕ್ಷಾಮಾದಿಗಳನ್ನು ತಡೆಗಟ್ಟಲು ಕೈಲಾಗದಿರುವ ಪ್ರಭುತ್ವಕ್ಕೂ, ಬ್ರಿಟಿಷ್ ಪ್ರಜೆಯಾದ ನಾನೇ ಹೊಣೆಗಾರನೆಂದು ನನ್ನ ಮನಸ್ಸಿಗೆ ನಾಟಿಹೋಯಿತು' ಎಂದು ಹೇಳಿರುವನು.

ಅರ್ಥಶಾಸ್ತ್ರನೇತ್ರನಾದ ಹೆಚ್. ಎಮ್. ಹಿಂಡಮನ್ನನು,[೩] 'ನಾವು ನೋಡುತ್ತಿದ್ದ ಹಾಗೆಯೇ, ಹಿಂದೂದೇಶವು ತೀರ ದುರ್ಬಲವಾಗಿ ಹೋಗುತ್ತಿರುವುದು; ನಮ್ಮ ಆಡಳಿತದಲ್ಲಿರುವ ಆ ಮಹಾ ಜನಾಂಗದ ಜೀವನ ರಕ್ತವೇ—ಆ ಜೀವನದ ಜೀವಾಳವೇ—ನಿಧಾನವಾಗಿದ್ದಂತೆ ಕಂಡುಬಂದರೂ ಅತಿ ತೀವ್ರತೆಯಿಂದ ಕ್ಷೀಣಿಸುತ್ತಿದೆ' ಎಂದು ಅಭಿಪ್ರಾಯಪಟ್ಟಿರುವನು.

ಈ ದೃಶ್ಯಗಳಲ್ಲಿ ಕಂಡುಬಂದ ಸ್ಥಿತಿಗತಿಗಳನ್ನು ಪರಿಶೀಲಿಸುವದಕ್ಕಿಂತ ಅಲ್ಲಿನ ವಸ್ತುಸ್ಥಿತಿಯನ್ನೇ ಸೂಕ್ಷ್ಮ ದೃಷ್ಟಿಯಿಂದ ಪರೀಕ್ಷಿಸೋಣ. ಪುರಾತನ ಕಾಲದ ನಿಪುಣರಾದ ಕಲಾವಿದರೂ, ಕೈಗಾರಿಕೆಯ ಕೆಲಸಗಾರರೂ

---

೧. ಶ್ರೀ ಪಿ. ಪಿಳ್ಳೆಯವರ 'ಹಿಂದೂ ದೇಶದಲ್ಲಿ ಆರ್ಥಿಕ ಸ್ಥಿತಿಗತಿಗಳು' ಪುಟ XII

೨. ಶ್ರೀ ವಿ. ಹೆಚ್. ರೂಥರುಫೋರ್ಡ್‌ರ 'ಆಧುನಿಕ ಭಾರತ' ಪುಟ ೧೦೬

೩. ಶ್ರೀ ಹೆಚ್ ಯಂ. ಹಿಂಡಮನರ 'ಹಿಂದೂದೇಶದ ದಾರಿದ್ರ್ಯ' ಪುಟ ೧೫೨

ತಮ್ಮ ವೃತ್ತಿಜೀವನವನ್ನು ಕಳೆದುಕೊಂಡಿರುವರೆಂದು ಕಾಣುವೆವು; ಅವರಿಗೆ ತಮ್ಮ ಹಿಂದಿನ ವೃತ್ತಿಗೆ ಪ್ರತಿಯಾಗಿ ಬೇರಾವ ವೃತ್ತಿಯೂ ಏರ್ಪಟ್ಟಿಲ್ಲ. ಹೀಗಲ್ಲದೆ ಇವರೆಲ್ಲರೂ ಹಿಂದಿಗಿಂತಲೂ ಇನ್ನೂ ಬೆಳೆದು ಹೆಚ್ಚಾಗಿರುವ ಜನಸಂಖ್ಯೆಯೊಡನೆ ಆ ಪುಣ್ಯಾಜೀವನವನ್ನು ನಡೆಯಿಸುವುದಕ್ಕಾಗಿ ಜಮೀನು ವ್ಯವಸಾಯವೃತ್ತಿಗೆ ತಳ್ಳಲ್ಪಟ್ಟಿರುವರು. ವರುಷದಲ್ಲಿ ಸ್ವಲ್ಪಕಾಲ ಮಾತ್ರ ಅವರು ದುಡಿಯುವರಲ್ಲದೆ, ಇನ್ನುಳಿದ ಬೇಸಿಗೆಯ ಕಾಲದಲ್ಲೆಲ್ಲ ಅವರು ಸೋಮಾರಿಗಳಾಗಿಯೇ ಇರುವರು.

ಯುರೋಪಖಂಡದಲ್ಲಿರುವುದಕ್ಕಿಂತಲೂ ಹಿಂದೂದೇಶದಲ್ಲಿ ಕಳೆದ ಶತಮಾನದಲ್ಲಿ ಪ್ರಜಾಭಿವೃದ್ಧಿಯ ಪ್ರಮಾಣವು ಬಹಳ ಕಡಿಮೆಯಾಗಿದೆ. ಸ್ಟೇಟ್ಸ್‌ಮನ ಪತ್ರಿಕೆಯ ವಾರ್ಷಿಕ ಸಂಚಿಕೆಯಲ್ಲಿ ಬರೆದಿರುವಂತೆ, ಈ ಹಿಂದಿನ ಮೂವತ್ತು ವರುಷಗಳ ಜನಗಣತಿಯಿಂದ ತಿಳಿದುಬರುವಂತೆ ಪ್ರಜಾವೃದ್ಧಿಯ ನೂರರ ಪ್ರಮಾಣವನ್ನು ಗ್ರೇಟ್‌ಬ್ರಿಟನ್ನಿನೊಡನೆ ಹೋಲಿಸಿ ನೋಡಬಹುದು.

| | ೧೮೯೧-೧೯೦೧ | ೧೯೦೧-೧೯೧೧ | ೧೯೧೧-೧೯೨೧ |
|---|---|---|---|
| ಹಿಂದೂದೇಶ | ೨.೫ | ೬.೧ | ೧.೨ |
| ಗ್ರೇಟ್‌ಬ್ರಿಟನ್ | ೧೨.೨ | ೧೧.೬ | ೫.೪ |

ಆದುದರಿಂದ ಪ್ರಜಾವೃದ್ಧಿಯು ಈ ಸಮಸ್ಯೆಗೆ ಕಾರಣಭೂತವಾಗಿಲ್ಲ.

ನಾವು ಚೆನ್ನಾಗಿ ಕಾಣುವಂತೆ ದೇಶದ ವಿದೇಶೀಯವ್ಯಾಪಾರವು ನಮ್ಮ ದೇಶದಲ್ಲಿ ತಯಾರಿಸಿದ ವಸ್ತುಗಳನ್ನು ರಫ್ತುಮಾಡಿ ಅದೇ ವಿಧವಾದ ವಸ್ತುಗಳನ್ನೇ ಪರದೇಶದಿಂದ ಆಮದುಮಾಡುವಂತಾಗಿದೆಯಲ್ಲದೆ ಬರಿಯ ಕಚ್ಚಾಪದಾರ್ಥಗಳನ್ನೇ ವಿದೇಶಕ್ಕೆ ರಫ್ತು ಮಾಡುತ್ತಿದೆ. ಗೃಹವೃತ್ತಿಯಾಗಿ ಗ್ರಾಮೋದ್ಯೋಗವಾಗಿದ್ದ ಹತ್ತಿಯಿಂದ ನೂತು ನೇಯುವ ಉದ್ಯಮವೇ ಹೇಳಹೆಸರಿಲ್ಲದಂತೆ ಮಾಯವಾಗಿ ಅದರ ಸ್ಥಾನದಲ್ಲಿ ಬೇರಾವ ವೃತ್ತಿಯೂ ಬಂದು ಜನರ ಜೀವನವನ್ನು ನಡೆಯಿಸುವ ಸಾಧನವಾಗಿಲ್ಲ. ನೌಕಾನಿರ್ಮಾಣವೂ, ನಾವಿಕತ್ವವೂ ಹೇಳಿದರೆ ಕೇಳುವ ಒಂದು ಕತೆಯಾಗಿದೆ.

ಬಹು ಸಂಖ್ಯಾಕವಾದ ಕ್ಷಾಮಗಳು [1] ದೇಶದಲ್ಲಿ ತಲೆದೋರಿದ್ದು ವೆಂದು ನಾವು ಕೇಳಿದ್ದರೂ ಹಿಂದಿನ ಭರತಖಂಡದ ಇತಿಹಾಸದಲ್ಲೆಂದೂ ಅನುಭವಿಸದ ಕ್ಷಾಮಗಳು ಕಳೆದ ಅರ್ಧ ಶತಮಾನದಲ್ಲಿಯೇ ತಲೆದೋರಿ ಪ್ರಚಂಡ ಹಾವಳಿಯನ್ನುಂಟುಮಾಡಿರುವವು. ಇದರಲ್ಲಿ ಐಶ್ವರ್ಯದ ಹಂಚಿ ಕೆಯ ಸಾಮರ್ಥ್ಯವು ಅತ್ಯಂತ ಅಪಾರವಾದುದು.

ಆಡಳಿತವು ಎಲ್ಲ ಕಡೆಗಳಲ್ಲೂ ಪ್ರಾಸ್ತವವಾಗಿ ಐರೋಪ್ಯ ಅಧಿಕಾರಿ ಗಳ ಕೈಲಿರುವುದು. ಅವರು ಸಹಜವಾಗಿ ತಮ್ಮ ದೇಶಕ್ಕೆ ತಾವೆಂದು ಹಿಂದಿರುಗುವರೋ ಅದನ್ನೇ ಕಾಯುತ್ತ ಕೆಲಸಮಾಡುತ್ತಲಿರುವರು. ಅವರ ಶ್ರದ್ಧೆಯು ತಾವು ಯಾರನ್ನು ಆಳುವರೋ ಅವರ ಶ್ರದ್ಧೆಯೊಡನೆ ಐಕ್ಯ ವಾಗಿಲ್ಲ; ಅಲ್ಲದೆ ತಾನು ಆಡಳಿತ ನಡೆಸುವವರ ಜವಾಬ್ದಾರಿಯನ್ನೂ ಹೊತ್ತಿಲ್ಲ. ಹಿಂದೂದೇಶದ ಭೂಮಿಯ ಮೇಲೆ ಅವರ ಕಾಲುಗಳು ನಿಂತಿ ದ್ದರೂ ಅವರ ಮುಖವೇನೋ ತಮ್ಮ ದೇಶದ ಕಡೆಗೇ ತಿರುಗಿರುವುದು. ಒಂದಾನೊಂದು ಕಾಲದಲ್ಲಿ ರಾಜ್ಯಾಡಳಿತವನ್ನು ವಹಿಸಿದ್ದ ಸ್ವದೇಶೀಯರು ಈಗ ಅತ್ಯಲ್ಪ ವೇತನವನ್ನು ಪಡೆಯುತ್ತ ಗುಮಾಸ್ತೆಗಳ ಸಮಾಜದ ದರ್ಜೆಗೆ ಇಳಿಸಲ್ಪಟ್ಟಿದ್ದಾರೆ.

ದೇಶವನ್ನು ತಮ್ಮ ಸ್ವಾಧೀನಪಡಿಸಿಕೊಂಡಾಗ ಆಂಗ್ಲೇಯರು ಸ್ಥಾಪಿ ಸಿದ 'ರಾಷ್ಟ್ರೀಯ ವಿದ್ಯೆಯ ವಿಶಾಲ ಪದ್ಧತಿಯು' [2] ಶಾಲೆಗಳಿಗೆ ಮೀಸ ಲಾಗಿದ್ದ ಇನಾಮುಗಳಿಗೆ ಕಂದಾಯ ವಿಧಿಸಲ್ಪಟ್ಟು ಇತರ ಸ್ವದೇಶೀಯ ಸಂಸ್ಥೆಗಳ ಗತಿಯನ್ನೇ ಅನುಭವಿಸಿದುವು.

ಸುವ್ಯವಸ್ಥಿತವಾಗಿ ಅಭಿವೃದ್ಧಿಯಲ್ಲಿರುವ ರೈಲ್ವೆಯ ಯೋಜನೆಯನ್ನು ಕಾಣುವೆವೇ ವಿನಾ, ವ್ಯವಸಾಯದಮೇಲೂ, ನೀರಾವರೀ ಯೋಜನೆಯ ಮೇಲೂ ಅತ್ಯಲ್ಪ ವೆಚ್ಚವಾದಂತೆ ಕಂಡುಬರುತ್ತದೆ.

ಹಿಂದೂದೇಶವು ತನ್ನ ಪರದೇಶದ ಸಂಬಂಧ ಬಾಂಧವ್ಯಗಳಲ್ಲಿ 'ಸ್ವತಂತ್ರ

---

೧ ಶ್ರೀ. ಎ. ಲಿವಡೇಯವರ 'ಹಿಂದೂದೇಶದ ಕ್ಷಾಮಗಳ ಆರ್ಥಿಕ ಪರಿಸ್ಥಿತಿ ಮತ್ತು ಇತಿಹಾಸ' ಪರಿಶಿಷ್ಟ ೧.

೨ ಶ್ರೀ. ಜೆ. ಮತ್ತಾಯಿರವರ 'ಬ್ರಿಟಿಷ್ ಹಿಂದೂಸ್ಥಾನದಲ್ಲಿ ಗ್ರಾಮಗಳ ಆಡಳಿತ' ಪುಟ ೪೨.

(ಸ್ವೇಚ್ಛಾ) ವ್ಯಾಪಾರ ನೀತಿಯನ್ನು ಅನುಭವಿಸುತ್ತಿದೆ.' ಆದರೆ ಅಗತ್ಯವಾದ ಕಂದಾಯವೆಲ್ಲವೂ ಉಪ್ಪಿನ ಗುತ್ತಿಗೆಯಿಂದಲೂ, ಭೂಕಂದಾಯದಿಂದಲೂ ಅಲ್ಲದೆ ಇನ್ನಿತರ ಪುರಾತನ ರೀತಿಯ ಸುಂಕಗಳಿಂದಲೂ ವಸೂಲ ಮಾಡ ಲಾಗುತ್ತಿತ್ತು.

ಒಂದು ರಾಷ್ಟ್ರಜೀವನದ ಈ ಅಲ್ಪಕಾಲದಲ್ಲಿಯೆ, ಹತ್ತೊಂಬತ್ತನೆಯ ಶತಮಾನದ ವೈಭವ ಜೀವನಚಿತ್ರವು ಇಪ್ಪತ್ತನೆಯ ಶತಮಾನದ ದುಃಖ ಮಯ ಚರಿತ್ರೆಗೆ ಪರಿವರ್ತಿತವಾಗುವುದಕ್ಕೆ ಏನೇನು ಸಂಭವಗಳುಂಟಾ ದುವೋ ಅವನ್ನೆಲ್ಲವನ್ನೂ ವಿಚಾರಿಸುವುದು ಈಗ ನಮ್ಮ ಕರ್ತವ್ಯವಾಗಿದೆ.

ಒಂದು ರಾಷ್ಟ್ರದ ಸುಖ-ಸಂಪತ್ತುಗಳಿಗೆ ವ್ಯತ್ಯಾಸವನ್ನುಂಟು ಮಾಡುವ ಪರಿಸ್ಥಿತಿಗಳನ್ನು ವಿಶಾಲದೃಷ್ಟಿಯಿಂದ ಹೀಗೆ ವಿಭಾಗಿಸಬಹುದು: ೧. ಮನುಷ್ಯನಲ್ಲಿ ಜನ್ಯವಾಗಿರುವುವು. ೨. ಸನ್ನಿವೇಶದಿಂದುಂಟಾದುವು. (ಅ) ಪ್ರಾಕೃತಿಕ (ಆ) ಕೃತಕ.

ಹಿಂದೂದೇಶದ ರೈತನ ಜನ್ಯಗುಣಗಳನ್ನು, ಅವನ ಬುದ್ಧಿಕುಶಲತೆ ಗಳನ್ನು ಕುರಿತು, ಎಂತಹ ಕಷ್ಟವಾದ, ನಿರಾಶಾಜನಕವಾದ ಪರಿಸ್ಥಿತಿ ಯಲ್ಲಿಯೂ ಸಹ ಅವನಿಗಿರುವ ಸಹಿಷ್ಣುತೆ, ತಾಳ್ಮೆಯನ್ನು ಕುರಿತು ಯಾರೂ ಎಂದಿಗೂ ಪ್ರಶ್ನಿಸುವಂತೆಯೇ ಇಲ್ಲ; ಆದುದರಿಂದ ಈ ವಿಷಯವನ್ನು ಇಂಗ್ಲೆಂಡಿನ ಕೂಲಿಕಾರ ಮುಖಂಡರಲ್ಲಿ ಸುಪ್ರಸಿದ್ಧನಾದವನ ಸಾಕ್ಷಿ ಸಾಹಿತ್ಯದಿಂದ ತಳ್ಳಿಹಾಕಬಹುದು. ಮಾಕ್ಡೊನಾಲ್ಡರು 'ಪ್ರಪಂಚದಲ್ಲೆಲ್ಲ ಹಿಂದೂದೇಶದ ಪ್ರಜೆಗಳು [೧] ಬಹಳ ಚತುರರಾದ ಕೆಲಸಗಾರರಾಗಿರುವರು; ಅವರ ವ್ಯವಸಾಯ ಕ್ಷೇತ್ರಗಳೆಲ್ಲವೂ ಬಹುಮಟ್ಟಿಗೆ ಫಲವತ್ತಾದುದಾಗಿ ಬಹು ಬೆಲೆ ಬಾಳುವ ಫಸಲನ್ನು ಕೊಡುತ್ತಿದ್ದುವು' ಎಂಬುದಾಗಿ ಅಭಿ ಪ್ರಾಯಪಟ್ಟಿರುವರು.

ಇನ್ನು ನೈಸರ್ಗಿಕ ಸನ್ನಿವೇಶಗಳನ್ನು ಪರಿಶೀಲಿಸಿದಾಗ, ಹಿಂದೂ ದೇಶದ ಹಾಗೆ ಅಮೂಲ್ಯವಸ್ತುಸಂತತಿಯಿಂದ ನಿಬಿಡವಾದ ದೇಶಗಳು ಕೇವಲ ಕೆಲವು ಮಾತ್ರ ಇರುವವು. ಮಾಂಗನೀಸು, ತಾಮ್ರ, ಕಬ್ಬಿಣ,

---

೧ ಶ್ರೀ. ಜೆ. ಆರ್. ಮಾಕ್ಡೊನಾಲ್ಡರ 'ಭಾರತವು ಜಾಗೃತಗೊಳ್ಳಲಿ' ಎಂಬುದ ರಿಂದ ಪುಟ ೧೫೫.

ಕೊನೆಗೊಂಡು, ಇನ್ನೇನಾದರೂ ಅಲ್ಪ ಸ್ವಲ್ಪ ತೆರಿಗೆಯು ಹೆಚ್ಚಿದಲ್ಲಿ ಅವನ ಪಿತ್ರಾರ್ಜಿತ ಆಸ್ತಿಗೇ ಆ ಬಾಧೆ ಬರುವಂತಹ ಪರಿಣಾಮವೇರ್ಪಡುವುದು. ಪ್ರತಿಯೊಬ್ಬ ವ್ಯಕ್ತಿಯು ಕೊಡಬಲ್ಲ ಚೈತನ್ಯವನ್ನು ಅಳತೆ ಮಾಡುವ ವಿಧಾನ ವನ್ನು ಕಂಡುಹಿಡಿಯುವದು ಮಾನವನ ಬುದ್ಧಿಶಕ್ತಿಗೇ ಅಸಾಧ್ಯವಾದುದ ರಿಂದ, ಯಾವ ವಿಧವಾದ ಕಂದಾಯದ ವಿಧಾನವಾಗಲಿ ಪದ್ಧತಿಯಾಗಲಿ ಅಲ್ಪ ಸ್ವಲ್ಪ ಮುಂದಿಗೆ ಮಾತ್ರ ಕಠಿಣತರವಾಗಿ ಕಾಣಬಹುದು. ಆದರೆ ಮಾನವನಲ್ಲಿರುವ ಶಕ್ತಿಸಾಮರ್ಥ್ಯಗಳಿಗೆ ಅವನಲ್ಲಡಕವಾಗಿರುವ ಸತ್ವಕ್ಕೆ ಯಾವ ಕುಂದಕವು ಬರದಂತೆ ಅತ್ಯಂತ ಜಾಗರೂಕತೆಯನ್ನು ತೆಗೆದುಕೊಳ್ಳ ಬೇಕು; ಅಲ್ಲದೆ ಸಾಧ್ಯವಾದ ಮಟ್ಟಿಗೂ ಜೀವನವನ್ನು ಮಾತ್ರ ತಳ್ಳಿಕೊಂಡು ಹೋಗಲು ಸಾಕಾಗುವ ಆದಾಯದ ಮೇಲೆ ಯಾವ ಹೊರೆಯೂ ಹೇರ ಲ್ಪಡಲಾಗದು.

ಈ ಸಂದರ್ಭಗಳಲ್ಲಿ, ಪ್ರಜೆಗಳಿಂದ ಉತ್ಪನ್ನವಾಗಬಹುದಾದ ಮೊತ್ತ ವನ್ನು ವಿಚಾರಿಸಿಕೊಂಡಮೇಲೆ, ಪ್ರಜೆಗಳಿಂದ ಸಲ್ಲಿಸಲ್ಪಟ್ಟ ರಾಜ್ಯಾ ದಾಯದ ಪ್ರತಿಯೊಂದು ರೂಪಾಯಿಗೂ ತಕ್ಕ ಬೆಲೆ ಸಿಗುವಂತೆ ಪ್ರಭುತ್ವ ಧನವು ವೆಚ್ಚ ಮಾಡಲ್ಪಡಬೇಕು. ಒಂದೇ ಒಂದು ತರಗತಿಯವರಿಗೆ ಅಥವಾ ಸಮಾಜಕ್ಕೆ ಮಾತ್ರ ಲಾಭದಾಯಕವಾಗುವಂತೆ ಏರ್ಪಡುವ ಪದ್ಧತಿಗಳಿಗೆ ವ್ಯಯವಾಗುವುದಕ್ಕೆ ಪ್ರತಿಯಾಗಿ ಸಾರ್ವಜನಿಕರೆಲ್ಲರ ಉತ್ಪತ್ತಿಯನ್ನು ಅಭಿ ವೃದ್ಧಿಗೊಳಿಸುವಂತಹ ಕಾರ್ಯಗಳಿಗೇ ವೆಚ್ಚ ಮಾಡಲ್ಪಡಬೇಕು; ಅದರಲ್ಲಿಯೂ ಆಡಳಿತದ ಅಧಿಕಾರಿಗಳ ವೆಚ್ಚವಂತೂ ಬಹಳ ಸ್ವಲ್ಪವಾಗಿರುವಂತಿರಬೇಕು.

ರಾಜ್ಯಾದಾಯವು ರಾಷ್ಟ್ರದ ಸಂಪತ್ತಿನ ಒಂದು ಅಂಗವಾಗಿರು ವುದರಿಂದ, ಪ್ರಜೆಗಳ ಪರವಾಗಿ ಅವರ ಸುಖಕ್ಕಾಗಿ ಪ್ರಜೆಗಳಿಗೇ ವ್ಯಯದ ರೂಪವಾಗಿ ಹಿಂದಕ್ಕೆ ಕೊಡಲ್ಪಡಬೇಕು. ಹಾಗೆ ಹಿಂದಕ್ಕೆ ಕೊಡಲ್ಪಡದ ಯಾವ ಹಣವೇ ಆಗಲಿ ಅವರನ್ನು ಅದೇ ಪ್ರಮಾಣದಲ್ಲಿ ಬಡವರನ್ನಾಗಿ ಮಾಡುವುದು; ಅಂದರೆ ಅವರ ಆದಾಯದ ಸಂಪೂರ್ಣ ಫಲವು ಅವರಿಗೆ ಸಿಗುವುದಿಲ್ಲವಾದುದರಿಂದ ದಾರಿದ್ರ್ಯವು ನೆಲಸುತ್ತಿದೆ.

—

## ೪. ಪ್ರಭುತ್ವದ ವೆಚ್ಚಗಳು

ಕೇಂದ್ರ ಮತ್ತು ಪ್ರಾಂತಿಕ ಸರಕಾರಗಳೆಲ್ಲವುಗಳ, ೧೯೨೫-೨೬ನೆಯ ಸಾಲಿನ ಹಣ ಕಾಸಿನ ಅಂಕಿ ಅಂಶಗಳನ್ನು ಸೂಚಿಸುವ ಗೋಷ್ವಾರೆಯನ್ನು ನೋಡಿ, ತಯಾರಿಸಿದ್ದ ಈ ಕೆಳಗೆ ಕಂಡ ನಿವ್ವಳ ವೆಚ್ಚದ ಅಂಕಿಗಳ ಪಟ್ಟಿಯು ಯಾವ ಯಾವ ಬಾಬಿಗಾಗಿ ಎಷ್ಟೆಷ್ಟು ಹಣವು ವಿನಿಯೋಗವಾಗುತ್ತಿದೆಯೋ ಅದನ್ನು ತಿಳಿಸಿಕೊಡುವ ಉಪಯುಕ್ತ ಸಾಧನವಾಗಿಯೂ ಬೋಧನಾತ್ಮಕವಾದುದಾಗಿಯೂ ಇದೆ:-

ಎರವಲಾಗಿ ತೆಗೆದುಕೊಂಡಿರುವ

| | | |
|---|---|---|
| ಉದ್ಯೋಗಗಳ ಖಾತೆ | ೨೧ ೬೨,೦೯,೦೦೯ | ೧೫.೨ |
| ಸೈನ್ಯದ ಖಾತೆ | ೫೫,೯೯,೮೫,೬೫೪ | ೩೯.೫ |
| ದೇಶಾಡಳಿತದ ಬಾಬು | ೫೫,೪೪,೩೩,೫೮೭ | ೩೯.೨ |
| ಚಿಲ್ಲರೆಯ ಬಾಬು | ೮,೭೦,೬೦,೫೩೫ | ೬.೧ |
| ರೂಪಾಯಿಗಳು | ೧೪೧,೭೬,೮೫,೭೮೫ | ೧೦೦.೦ |

ದೇಶಾಡಳಿತದ ಬಾಬಿನ ವಿವರಗಳು ಕೆಳಗೆ ಕಂಡಂತಿವೆ:

| | ಲಕ್ಷ ರೂಪಾಯಿನ ಪ್ರಮಾಣದಲ್ಲಿ | ನೂರಕ್ಕೆ |
|---|---|---|
| ಸಾಮಾನ್ಯ ಆಡಳಿತ | ೧೨೪೯ | ೮.೯ |
| ಲೆಕ್ಕ ಸರಿ ನೋಡುವುದು | ೮೪ | ೦.೫೮ |
| ನ್ಯಾಯಾಂಗ | ೪,೬೯ | ೩.೩೧ |
| ತುರಂಗ | ೧೯೪ | ೧.೩೮ |
| ಪೋಲೀಸು | ೧೧೬೯ | ೮.೨ |
| ರೇವುಗಳು | ೩೧ | ೦.೨೧ |
| ಧಾರ್ಮಿಕ ಸಂಸ್ಥೆಗಳು | ೩೨ | ೦.೨೨ |
| ರಾಜಕೀಯ | ೩,೩೭ | ೨.೪ |
| ವೈಜ್ಞಾನಿಕ | ೮೬ | ೦ ೬ |
| ಶಿಕ್ಷಣ | ೧೦೬೬ | ೭.೬ |

| | | |
|---|---|---|
| ವೈದ್ಯಕೀಯ | ೩೨೦ | ೨.೨೫ |
| ಆರೋಗ್ಯ | ೧೮೧ | ೧.೨೫ |
| ವ್ಯವಸಾಯ | ೧೭೯ | ೧.೨೪ |
| ಕೈಗಾರಿಕೆ | ೧೩೦ | ೦.೯೨ |
| ವಿಮಾನ ಇತ್ಯಾದಿ ಇತರ | ೧೭ | ೦.೧[illegible] |
| | ೫೫೪೪ | ೩೯.೨೦ |

ಈ ಸಂದರ್ಭದಲ್ಲಿ ಅದೇ ವರುಷ ಅಮೇರಿಕಾದೇಶದ ಸಂಯುಕ್ತ ಸಂಸ್ಥಾನದ ಕೇಂದ್ರ, ಸಂಸ್ಥಾನಿಕ, ಸ್ಥಳೀಯ ಸರಕಾರಗಳ ವೆಚ್ಚದ ಹಂಚಿಕೆಯ ವಿಧಾನವನ್ನೂ ಮೇಲೆ ತಿಳಿಸಿರುವುದರೊಂದಿಗೆ ಹೋಲಿಸಿ ನೋಡುವುದು ಉಪಯುಕ್ತವಾಗಿರುತ್ತದೆ.

| | ಮಿಲಿಯನು ಪ್ರಮಾಣದಲ್ಲಿ | ನೂರಕ್ಕೆ |
|---|---|---|
| ಎರವಲು ಉದ್ಯೋಗಗಳು | ೨೪೩೨ | ೨೨.೩ |
| ರಕ್ಷಣೆ | ೨೦೮೫ | ೧೮.೭ |
| ಕೇಂದ್ರ ಸರಕಾರ | ೮೬೭ | ೭.೮ |
| ಶಿಕ್ಷಣ | ೨೧೬೭ | ೧೯.೫ |
| ಮಾರ್ಗ ಸೌಕರ್ಯಗಳು | ೧೫೬೮ | ೧೪.೧ |
| ಸಮಾಜ ಸೌಖ್ಯ | ೧೦೨೦ | ೯.೧ |
| ಸಾರ್ವಜನಿಕ ಪ್ರಯೋಜನ ಕಾರ್ಯಗಳು | ೫೮೩ | ೫.೨ |
| ಆರ್ಥಿಕ ಅಭಿವೃದ್ಧಿ ಕಾರ್ಯಗಳು | ೨೦೭ | ೧.೯ |
| ಚಿಲ್ಲರೆ | ೧೫೫ | ೧.೪ |
| | ೧೧೧೩೪ | ೧೦೦.೦ |

ತನ್ನ ಆರ್ಥಿಕ ಪರಿಸ್ಥಿತಿಯನ್ನು ಅಂದರೆ ಹಣಕಾಸಿನ ಆದಾಯ ವಿನಿಯೋಗಗಳನ್ನು ತನ್ನ ಕೈಯಲ್ಲಿ ಇಟ್ಟುಕೊಂಡಿರುವ ಪ್ರಜಾಸತ್ತಾತ್ಮಕ ಪ್ರಭುತ್ವದ ದೇಶವೊಂದರ ಆದಾಯವನ್ನು ಉಪಯುಕ್ತ ಮಾಡಿಕೊಂಡು

ವೆಚ್ಚಮಾಡುವ ಅಂಕಿಗಳೇ ಈ ಮೇಲೆ ಹೇಳಿರುವವೆಂಬುದನ್ನು ನೆನಪಿನಲ್ಲಿಟ್ಟಿರಬೇಕು. ಹಾಗೆಯೇ ಹಿಂದೂದೇಶದಲ್ಲಿ ಇಂತಹ ಸಾರ್ವಜನಿಕ ಕೈಯಲ್ಲಿಲ್ಲೆಂಬುದನ್ನೂ ಗಮನದಲ್ಲಿಟ್ಟುಕೊಳ್ಳಬೇಕು. ಅಲ್ಲದೆ ಈ ಎರಡು ದೇಶಗಳಲ್ಲಿಯೂ ರಾಜ್ಯಾದಾಯದ ವಿನಿಯೋಗದ ವಿಧಾನ, ವಿಂಗಡಿಸುವ ರೀತಿಯೇ ಭಿನ್ನವಾಗಿದ್ದುದರಿಂದ, ಬಹು ಸೂಕ್ಷ್ಮವಾಗಿ ಒಂದರೊಡನೊಂದನ್ನು ಹೋಲಿಸಿ ಹೇಳಲಾಗುವದಿಲ್ಲ; ಆದರೆ ಈ ಎರಡೂ ರಾಜ್ಯಾಂಗಗಳಲ್ಲಿರುವ ನೀತಿಯ ವಿಶಾಲ ವ್ಯತ್ಯಾಸವನ್ನು ನಾವು ಕಾಣಬಹುದು; ಅಷ್ಟೇ ಅಲ್ಲದೆ ವಿಶೇಷವಾಗಿ ಅಮೇರಿಕಾದೇಶವು ತನ್ನ 'ರಕ್ಷಣೆ'ಯಲ್ಲಿ 'ಪೋಲೀಸು ಖಾತೆಯನ್ನು' ಒಳಗೊಂಡಿದೆಯೆಂಬುದನ್ನು ನಾವು ನೆನಸಿಕೊಂಡಾಗ, ಇತರ ರಾಷ್ಟ್ರಗಳಿಗಿಂತಲೂ ಅಲ್ಲಿಯ ಯುದ್ಧ ಸೈನ್ಯಕ್ಕೆ ಹೆಚ್ಚಿನ ವೇತನವೇ ಕೊಡಲ್ಪಡುತ್ತಿರುವುದೆಂಬುದನ್ನು ತಿಳಿದುಕೊಂಡಾಗ ಈ ಎರಡೂ ರಾಜ್ಯಾಂಗಗಳಲ್ಲಿರುವ ನೀತಿಯ ವಿಶಾಲ ವ್ಯತ್ಯಾಸವನ್ನು ಕಾಣಬಹುದು.

ಅಮೇರಿಕಾ ದೇಶವು ತನ್ನ ಸಾಲ, ಸೈನ್ಯ, ಸಾಮಾನ್ಯ ಸರಕಾರದ ವೆಚ್ಚಗಳಿಗಾಗಿ ತನ್ನ ಆದಾಯದ ನೂರಕ್ಕೆ ೪೮.೮ ನ್ನು ವ್ಯಯಮಾಡಿದಾಗ, ಉಳಿದುದರಲ್ಲಿ ದೇಶಾಭಿವೃದ್ಧಿಕಾರ್ಯದಲ್ಲಿನ ವಿದ್ಯೆಯ ವಿಸ್ತರಣಕ್ಕಾಗಿ ನೂರಕ್ಕೆ ೧೯.೫ ನ್ನು ವೆಚ್ಚಮಾಡುತ್ತಿರುವುದು. ನಮ್ಮ ಹಿಂದೂದೇಶದಲ್ಲಿ ಸಾಲ, ಸೈನ್ಯ, ಸಾಮಾನ್ಯ ಸರಕಾರದ ವೆಚ್ಚಗಳಿಗಾಗಿ ತನ್ನ ಪ್ರಭುತ್ವಾದಾಯದಲ್ಲಿ ನೂರರಲ್ಲಿ ೬೩.೭ ನ್ನು ಖರ್ಚುಮಾಡಿದಾಗ ಇತರ ದೇಶಾಭಿವೃದ್ಧಿಕಾರ್ಯಗಳಿಗಾಗಿ ಅತ್ಯಲ್ಪ ಭಾಗ ಮಾತ್ರ ಉಳಿದಿರುತ್ತದೆ. ಈ ಅಲ್ಪಸ್ವಲ್ಪ ಉಳಿದಿರುವುದನ್ನು ಶಿಕ್ಷಣಕ್ಕಾಗಿ ವೆಚ್ಚಮಾಡುವಾಗ, ನಮ್ಮ ಹಿಂದೂದೇಶದ ಪ್ರಭುತ್ವವು ಹಿಂದೂದೇಶದಲ್ಲಿರುವ ಯುರೋಪಿಯನ್ ಜನಾಂಗದ ಪ್ರತಿ ಐರೋಪ್ಯನಿಗೂ ತಲೆಗೆ ೨೫ ರೂಪಾಯಿನಂತೆ ವೆಚ್ಚಮಾಡುತ್ತಾರೆ. ತನ್ನ ದೇಶದ ಮಕ್ಕಳಿಗೆ ತಲೆಗೊಂದಕ್ಕೆ ನಾಲ್ಕಾಣೆಯಂತೆ ಭಿಕ್ಷೆ ಕೊಟ್ಟಂತೆ ವೆಚ್ಚಮಾಡುತ್ತ, ಹಿಂದೂದೇಶದಲ್ಲಿ ತಾತ್ಕಾಲಿಕರಾಗಿ ನೆಲಸಿರುವ ಐರೋಪ್ಯ ಪ್ರಜೆಗಳ ಮಕ್ಕಳ ವಿದ್ಯೆಗೆ ವೆಚ್ಚಮಾಡಿದುದರಲ್ಲಿ ನೂರಕ್ಕೊಂದು ಪಾಲಿನಂತೆ ವೆಚ್ಚಮಾಡುತ್ತಿದೆ. 'ತನ್ನ ವಶಕ್ಕೊಪ್ಪಿಸಲ್ಪಟ್ಟಿರುವ ಪ್ರಜೆಗಳ' ಹಿತದೃಷ್ಟಿಯಿಂದ ಈ ದೇಶಾಭಿವೃದ್ಧಿಯ ವೆಚ್ಚವು ಮಾಡ

ಲ್ಪಡುತ್ತಿದೆಯೇ ? ಈಗಿನ ಆರ್ಥಿಕ ವಿಧಾನದಲ್ಲಿ, ಹಿಂದೂದೇಶದ ಮಕ್ಕಳಿಗೇ ಎಂಜಲು ಚೂರುಗಳು ಮಾತ್ರ ಎಸೆಯಲ್ಪಡುತ್ತಿವೆ.

## ಎರವಲು ಉದ್ಯೋಗಗಳೂ, ಸೈನಿಕ ವೆಚ್ಚಗಳೂ

ಬೇರೆಬೇರೆ ದೇಶಗಳು ‘ ದೇಶರಕ್ಷಣೆಗಾಗಿ ’ ವೆಚ್ಚಮಾಡುವ ಮೊತ್ತದಿಂದ ಪ್ರೊ. ಕೆ. ಟಿ. ಷಾರವರು ಕೆಳಗೆ ಕೊಟ್ಟಂತೆ ಭಾಗಗಳನ್ನು (ನೂರಕ್ಕೆ) ಗುಣಿಸಿ ಲೆಕ್ಕ ಮಾಡಿರುವರು.

| | | | |
|---|---|---|---|
| ಹಿಂದೂದೇಶ | ೬೩.೮ | ಸ್ಪೇನ | ೧೭.೬ |
| ಇಂಗ್ಲೆಂಡ(ಸಂಯುಕ್ತರಾಜ್ಯ) | ೫೩.೭ | ಫ್ರಾನ್ಸ | ೨೦.೦ |
| ಆಸ್ಟ್ರೇಲಿಯಾ | ೪೮.೩ | ಇಟಲಿ | ೧೭.೩ |
| ಕಾನಡಾ | ೨೪.೨ | ಸಂಯುಕ್ತ ಸಂಸ್ಥಾನಗಳು | ೩೮.೨ |
| ದಕ್ಷಿಣ ಆಫ್ರಿಕಾ | ೫.೨ | ಜಪಾನ | ೪೯.೦ |

ಈ ಅಂಕೆಗಳೆಲ್ಲ ೧೯೨೨ ಕ್ಕೆ ಸಂಬಂಧಪಟ್ಟುವು; ಆದರೂ ಅವು ನಮಗೆ ಹಿಂದೂದೇಶವು ಹೇಗೆ ಪ್ರತಿಫಲರಹಿತ ವೆಚ್ಚಗಳಿಂದ ಹೇರಲ್ಪಟ್ಟಿವೆಯೆಂಬುದನ್ನು ವ್ಯಕ್ತಪಡಿಸುತ್ತದೆ. ಯಾವ ದೇಶವೇ ಆಗಲಿ ತನ್ನ ಕಷ್ಟಕ್ಕೆ ತಕ್ಕ ಫಲವನ್ನು ಪಡೆಯದಿದ್ದಾಗ, ಕಾಲಕ್ರಮೇಣ ಕೆಲವು ವರುಷಗಳಲ್ಲಿಯೇ ದೇಶವು ದಾರಿದ್ರ್ಯವನ್ನು ಅನುಭವಿಸುವ ದರ್ಜೆಗೆ ಸೆಳೆಯಲ್ಪಡುವುದಕ್ಕೆ ಇಷ್ಟೇ ಸಾಧನವು ಸಾಕಾಗದೇ ? ಪ್ರತಿಫಲರಹಿತವಾದ ಸಾಲಗಳನ್ನು ಬ್ರಿಟಿಷರೇ ಹಿಂದೂದೇಶವನ್ನು ತಾವು ಜಯಿಸಿಕೊಳ್ಳುವುದಕ್ಕಾಗಿ ಮಾಡಿಕೊಂಡುವು; ಅಷ್ಟೇ ಅಲ್ಲದೆ ತಮ್ಮ ಸಾಮ್ರಾಜ್ಯ ವಿಸ್ತರಣದ ಹಿತದೃಷ್ಟಿಯಿಂದ ಏಷ್ಯಾಖಂಡದಲ್ಲಿಯೂ, ಆಫ್ರಿಕಾಖಂಡದಲ್ಲಿಯೂ ತಾವು ನಡೆಯಿಸಿದ ಯುದ್ಧಗಳ ವೆಚ್ಚಕ್ಕಾಗಿ ಹಿಂದೂದೇಶವು ಕೊಡಬೇಕಾಗಿ ಬಂದಿತು. ಇದರ ಜತೆಗೆ ಕಳೆದ ಪ್ರಪಂಚದ ಮಹಾಯುದ್ಧದಲ್ಲಿ ಹಿಂದೂದೇಶದ ‘ ಪಾರಪತ್ಯಗಾರ ’ರಾದ ಇಂಗ್ಲಿಷರು ತಮಗೆ ತಾವೇ ಒಂದು ನೂರು ಪೌಂಡುಗಳನ್ನು ‘ ದಾನ ’ ಮಾಡಿಕೊಂಡಿರುವರು. ಆಗ ಹಿಂದೂದೇಶಕ್ಕಾದ ನಷ್ಟವನ್ನು ಪ್ರೊ. ಷಾ[೧] ರವರು ೧೮೦ ಕೋಟಿಗಳೆಂದು ಲೆಕ್ಕ ಮಾಡಿರು

---

೧ ಶ್ರೀ. ಕೆ. ಟಿ. ಷಾರವರ ‘ ಹಿಂದೂದೇಶದ ಸಂಪತ್ತೂ, ಸುಂಕಕೊಡುವ ಸಾಮರ್ಥ್ಯವೂ ’ ೨೭೬ನೆಯ ಪುಟ.

ವರು. ತನ್ನವಲ್ಲದ, ತನಗೇನೂ ಸಂಬಂಧಿಸದ ಯುದ್ಧಗಳಿಗಾಗಿ ಸಾಲಗಳನ್ನು ಮಾಡಿದುದರಿಂದ, ತನ್ನ ಹಿತಚಿಂತನೆಯ ದೃಷ್ಟಿಯಿಂದ ಯಾವುದೂ ನಡೆದಿಲ್ಲವಾದುದರಿಂದ, ಈ ವೆಚ್ಚಗಳನ್ನೆಲ್ಲಾ ಹಿಂದೂದೇಶದ ಮೇಲೆ ಹೇರುವುದು ಅತೀವ ಅನ್ಯಾಯವಾದುದು.

ಸೈನ್ಯ ರಕ್ಷಣೆಯ ವಿಚಾರದಲ್ಲಿ, ದೇಶದ ನಾನಾ ವಿಧದ ಅವಶ್ಯಕತೆಗಳನ್ನು ವಿಮರ್ಶಿಸಿದ ತರುವಾಯ, ಪ್ರೊಫೆಸರ್ ಷಾರವರು 'ಹಿಂದೂದೇಶದಲ್ಲಿರುವ ಸೈನ್ಯವು[1] ಎಷ್ಟು ಅನುಪಯುಕ್ತವಾದುದೋ ಅಷ್ಟು ಅತಿ ವೆಚ್ಚದ್ದಾಗಿರುವದು; ಹಿಂದೂದೇಶಕ್ಕೆ ಈ ಸಾಧನದಿಂದ ಸಲ್ಲುತ್ತಿರುವ ಸೇವೆಯು ಅದಕ್ಕಾಗಿ ತಾನು ಮಾಡುತ್ತಿರುವ ವೆಚ್ಚಕ್ಕೆ ಬಹಳವಾಗಿ ಯಾವ ಪ್ರಮಾಣವೂ ಇಲ್ಲದಂತಿರುವುದು' ಎಂದು ಹೇಳುತ್ತಾರೆ.

ರಾಮ್ಸೆಮೆಕ್ಡೊನಾಲ್ಡರವರು ಅದೇ ವಿಧವಾದ ತೀರ್ಮಾನಕ್ಕೆ ಬಂದು 'ನಿಸ್ಸಂದೇಹವಾಗಿ[2] ಹಿಂದೂದೇಶಕ್ಕೆ ಈ ವಿಚಾರದಲ್ಲಿ ನಾವು ಸರಿಯಾಗಿ ನಡೆದುಕೊಂಡಿಲ್ಲ'ವೆಂದು ಹೇಳುತ್ತಾ 'ಹಿಂದೂದೇಶದಲ್ಲಿರುವ ಸೈನ್ಯದ ಬಹುಭಾಗವು[3]–ಸತ್ಯವಾಗಿ ಅರ್ಧಭಾಗವು–ಸಾಮ್ರಾಜ್ಯಶಾಹಿಗಳಾಗಿರುವ ಸೈನ್ಯವಾಗಿದೆ; ಅದನ್ನು ಹಿಂದೂದೇಶದ ರಕ್ಷಣೆಗಲ್ಲದೆ ನಮ್ಮ ಕೆಲಸಗಳಿಗಾಗಿಟ್ಟುಕೊಂಡಿದ್ದೇವೆ; ಆದುದರಿಂದ ಅದಕ್ಕೆ ತಗುಲುವ ಖರ್ಚುವೆಚ್ಚಗಳು ಹಿಂದೂದೇಶದ ಹಣದಿಂದಲ್ಲದೆ ಸಾರ್ವಭೌಮ ಸರಕಾರದಿಂದಲೇ ಕೊಡಬೇಕಾಗಿದೆ' ಎಂದು ಹೇಳಿರುವರು.

## ದೇಶದ ಒಳ ಆಡಳಿತ

ಸಂಯುಕ್ತಸಂಸ್ಥಾನಗಳಿಗಿಂತಲೂ ಈ ವೆಚ್ಚವು ಐದರಷ್ಟು ಹೆಚ್ಚಾಗಿ ಇರುತ್ತದೆಂದು ಕಂಡುಬಂದಿದೆ. ಮಾಕ್ಡೊನಾಲ್ಡರು ಇದನ್ನು ಒಪ್ಪಿಕೊಳ್ಳುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. 'ಹಿಂದೂದೇಶದ ಸರಕಾರವು ಬಹಳ

---

೧ ಶ್ರೀ. ಕೆ. ಟಿ. ಷಾರವರ 'ಹಿಂದೂದೇಶದ ಸಂಪತ್ತೂ ಸುಂಕ ಕೊಡುವ ಸಾಮರ್ಥ್ಯವೂ' ೨೭೨ನೆಯ ಪುಟ.

೨ ಶ್ರೀ ಜೆ. ಆರ್. ಮಾಕ್ಡೊನಾಲ್ಡರ 'ಹಿಂದೂದೇಶದ ರಾಜ್ಯಭಾರ' ೧೫೩ನೇ ಪುಟ.

೩ „ „ ೧೫೪ „

ತುಟ್ಟಿಯಾದುದೆಂದು ಒಪ್ಪಿಕೊಳ್ಳಬೇಕಾಗಿದೆ.[೧] ಪರದೇಶದ ಪ್ರಭುತ್ವವು[೨] ಒಂದುವೇಳೆ ತನ್ನ ಬೆಲೆಗೆ ಎಷ್ಟೇ ತಕ್ಕುದಾಗಿದ್ದರೂ—ಯಾವಾಗಲೂ ಬಹಳ ದುಬಾರಿಯಾದ ರಾಜ್ಯಭಾರವೇ. '

ಹಿಂದೂದೇಶವು, ಜೀವನವುಟ್ಟವೇ ಹೆಚ್ಚಾಗಿರುವ ದೇಶವಾದ ಗ್ರೇಟ್ ಬ್ರಿಟನ್ನಿನೊಡನೆ ತನ್ನ ಅಧಿಕಾರಿಗಳಿಗಾಗಿ ಸ್ಪರ್ಧಿಸಬೇಕಾಗಿದೆ; ಆದುದರಿಂದ ಆಕರ್ಷಣೀಯವಾಗಿರುವುದಕ್ಕಾಗಿ ಸಂಬಳಗಳ ಮಟ್ಟವೂ ಅವಶ್ಯಕವಾಗಿ ಹೆಚ್ಚಾಗಿರಬೇಕಾಗಿದೆ. ಅಷ್ಟೇ ಅಲ್ಲದೆ, ಪರದೇಶದ ಅಧಿಕಾರವು, ಇನ್ನೂ ಹೆಚ್ಚಿನ ಸನ್ಮಾನವನ್ನು ಪಡೆದುದಾಗಿ, 'ಮಾನವಜೀವನದ ಬೆಲೆ 'ಯ ಸ್ವಲ್ಪ ಭಾಗವನ್ನೇ ಆಕ್ರಮಿಸಿಕೊಂಡಿರುವುದು. ಆಂಗ್ಲೇಯ ಪ್ರಭುತ್ವದ ಪ್ರಾರಂಭದ ದಿನಗಳಲ್ಲಿ, ಆಂಗ್ಲೇಯ ರಾಜ್ಯಾಂಗ ಪದ್ಧತಿಯು ವಿದೇಶೀಯ ವಾಗಿ ವಿಚಿತ್ರವಾಗಿಯೂ ಇದ್ದಾಗ, ಸುಖಮಯಜೀವನವನ್ನು ಒದಗಿಸು ತ್ತಿದ್ದ ಕೆಲವು ಕುಬೇರತ್ವದ ಹಿರಿಯ ಅಧಿಕಾರಸ್ಥಾನಗಳಿಗೆ ಇಂಗ್ಲಂಡಿನಿಂದ ಕೆಲವು ಮಂದಿ ನವತರುಣರನ್ನು ರಫ್ತುಮಾಡಿದರೆಂದರೆ ಹೇಗಾದರೂ ಕ್ಷಮಿಸಬಹುದು. ಆದರೆ ಈಗ ಸಾವಿರಾರು ಮಂದಿ ಪಾಶ್ಚಿಮಾತ್ಯಪದ್ಧತಿ ಯಲ್ಲಿಯೇ ವಿದ್ಯಾವಂತರಾಗಿರುವಾಗ, ಈ ಪದ್ಧತಿಗೆ ಅಣುಮಾತ್ರವೂ ಸಮ್ಮತಿ ಸಿಗಲಾರದು. ಈ ರಾಯಸಗಾರರ ಪ್ರಭುತ್ವವು ಈಗೀಗ ಆಲೋ ಚನೆಯಲ್ಲಿಯೂ ಆರಂಭದಲ್ಲಿಯೂ ಬಹಳ ಹಿಂದುಳಿದಿರುವುದು. ಕೆಲಸ ವೆಲ್ಲವೂ ಗೂಢಮಾರ್ಗಗಳಲ್ಲಿ ನಡೆಯುತ್ತಿದೆಯೇ ವಿನಾ ಅದು ದೇಶದ ಉತ್ಪತ್ತಿಯನ್ನೂ ಸಂಪತ್ಸಮೃದ್ಧಿಯನ್ನೂ ಅಭಿವೃದ್ಧಿಗೊಳಿಸಲು ಬಹಳ ಸ್ವಲ್ಪ ಮಾತ್ರ ಕೆಲ್ಸ ಮಾಡಿರುವುದು. ೧೯೧೩ರಲ್ಲಿ ತಿಂಗಳಿಗೆ ೧ಸಾವಿರ ರೂಪಾ ಯಿಗೆ ಮೇಲ್ಪಟ್ಟ ಸಂಬಳದ ಅಧಿಕಾರಸ್ಥಾನಗಳಲ್ಲಿ ನೂರಕ್ಕೆ ೯೬ ಸ್ಥಾನಗಳು ಐರೋಪ್ಯರಿಂದಲೂ ಆಂಗ್ಲೋ ಇಂಡಿಯನ್ನರಿಂದಲೂ ಆಕ್ರಮಿಸಲ್ಪಟ್ಟು, ನೂರರಲ್ಲಿ ೪ ಭಾಗವ ಸ್ಥಾನಗಳು ಮಾತ್ರ ಭಾರತೀಯರಿಂದ ನಿರ್ವಹಿಸಲ್ಪಡು ತ್ತಿದ್ದುವು. ಅಧಿಕಾರಸ್ಥಾನಗಳನ್ನೆಲ್ಲಾ ಒಟ್ಟಿಗೆ ಕೂಡಿಸಿ ಲೆಕ್ಕ ಮಾಡಿದರೆ,

೧ ಶ್ರೀ ಜೆ. ಆರ್. ಮಾಕ್ಡೊನಾಲ್ಡರ 'ಹಿಂದೂದೇಶದರಾಜ್ಯಭಾರ' ಪುಟ. ೧೪೫

೨ ,, ,, ೧೪೭ ,,

ಯುರೋಪಿಯನ್ನರಿಂದ ಆಕ್ರಮಿಸಲ್ಪಟ್ಟ ಅಧಿಕಾರಕ್ಕೆ ಸರಾಸರಿ ತಿಂಗಳಿಗೆ ೯೩೩ ರೂಪಾಯಿಗಳೂ, ಭಾರತೀಯರಿಂದ ನಿರ್ವಹಿಸಲ್ಪಡುತ್ತಿದ್ದುದಕ್ಕೆ ೩೭೧ ರೂಪಾಯಿಗಳೂ ಸಲ್ಲುತ್ತಿದ್ದುವು. ನಾವೀಗ ವೊತ್ತಗಳನ್ನು ಯಾರಿಗಾಗಿ ಅಧಿಕಾರ ನಡೆಸುತ್ತಿರುವರೋ ಆ ತೆರಿಗೆ ತೆರುವವನ ಪ್ರತಿಯೊಂದು ತಲೆಗೆ ಬರುವ ವರಮಾನದೊಡನೆ ಹೋಲಿಸಿ ನೋಡಿದರೆ,—೧೯೧೧ರಲ್ಲಿ ವರುಷ ಒಂದಕ್ಕೆ ೫೦ ರೂಪಾಯಿಗಳು—ಒಬ್ಬ ಯುರೋಪಿಯನ ಅಧಿಕಾರಿಯು ೨೨೪ ಮಂದಿ ತೆರಿಗೆ ತೆರುವ ಪ್ರಜೆಗಳಿಗೂ, ಭಾರತೀಯ ಅಧಿಕಾರಿಯು ೮೪ ಮಂದಿ ಸುಂಕ ಸಲ್ಲಿಸುವ ಪ್ರಜೆಗಳಿಗೂ ಸಮನಾಗುವರು. ನಾವು ಜನರ ಶಕ್ತಿಸಾಮರ್ಥ್ಯದ ದೃಷ್ಟಿಯಿಂದ ನೋಡಿದರೆ, ಐರೋಪ್ಯ ಮತ್ತು ಭಾರತೀಯ ಅಧಿಕಾರಿಗಳಿಬ್ಬರಿಗೂ ಸಹ ಬಹಳ ಹೆಚ್ಚಿನ ಸಂಬಳಗಳು ಕೊಡಲ್ಪಡುತ್ತಿವೆಯೆಂದು ನಮಗೆ ಕಣ್ಣಿಗೆ ಕಟ್ಟಿದಂತೆ ಕಂಡುಬರುವುದು. ಅತ್ಯಂತ ಐಶ್ವರ್ಯಯುತವಾದ ದೇಶದ ಸಿರಿವಂತ ಸಂಸ್ಥಾನವಾದ ನ್ಯೂಯಾರ್ಕಿನಲ್ಲಿ, ಅಲ್ಲಿನ ಪ್ರಜೆಯ ವಾರ್ಷಿಕ ಸರಾಸರಿ ಆದಾಯದ ಸುಮಾರು ೧೪ರಷ್ಟು, ಅಂದರೆ ವರುಷಕ್ಕೆ ೧೨,೦೦೦ ಡಾಲರುಗಳನ್ನು ಅಲ್ಲಿನ ಗವರ್ನರಿಗೆ ಕೊಡುವರು; ಹೀಗಿರುವಾಗ ಬೊಂಬಾಯಿ ಪ್ರಾಂತ್ಯವು ತನ್ನ ತೆರಿಗೆ ಕೊಡುವ ಸಾಮಾನ್ಯ ಪ್ರಜೆಯ ವರಮಾನದ ೨೪೦೦ರಷ್ಟನ್ನು ಅಂದರೆ ೧,೨೦,೦೦೦ ರೂಪಾಯಿಗಳನ್ನು (೪೫೦೦೦ ಡಾಲರು) ತನ್ನ ಗವರ್ನರಿಗೆ ಸಂಬಳರೂಪದಲ್ಲಿ ಸಲ್ಲಿಸುವುದು. ರಾಮ್ಸೆಮೆಕ್ಡೊನಾಲ್ಡನು ಈ ಪ್ರಶ್ನೆಯನ್ನು ಪರಿಶೀಲಿಸುತ್ತ ‘ ಪ್ರಭುತ್ವಾಧಿಕಾರದ ಪ್ರತಿಯೊಂದು ಅಂಗದಲ್ಲಿಯೂ ಸಹ, ಆ ಅಧಿಕಾರಿಗಳಿಗೆ ಸಲ್ಲಿಸುವ ಸಂಬಳವು ಪರದೇಶದ ಮಟ್ಟಕ್ಕಿರದೆ ಹಿಂದೂದೇಶದ ಜೀವನ ಮಟ್ಟಕ್ಕಿರಬೇಕು. ಇಲ್ಲಿಯವರೆಗೂ ನಾವು ಹಿಂದೂದೇಶಕ್ಕೆ ಬಹಳ ತೊಂದರೆಯನ್ನುಂಟುಮಾಡಿರುವೆವು. ಈ ಸುಧಾರಣೆಯು ತನ್ನದೇ ಆದ ಸ್ವತಂತ್ರ ರಾಜ್ಯಭಾರವು ಸುಲಭವಾಗಿ ಆಚರಣೆಯಲ್ಲಿಡಬೇಕಾದುದು ’ಎಂದು ಒಪ್ಪಿಕೊಂಡು ಸಲಹೆಯನ್ನಿತ್ತಿರುವರು.

ಮತ್ತಾವ ಕೆಲಸಕ್ಕೂ ಏನನ್ನೂ ಉಳಿಸದೆ, ರಾಜ್ಯಾದಾಯದ ಬಹುಭಾಗವು ಈ ಅಧಿಕಾರ ಆಡಳಿತಗಳಿಗೇ ವಿನಿಯೋಗವಾದುದೆಂಬ ಅಂಶವನ್ನು ಬದಿಗಿಟ್ಟರೂ, ಕಡೆಗೆ ಅಧಿಕಾರಸೂತ್ರಗಳನ್ನು ವಹಿಸಿದ ವ್ಯಕ್ತಿಗಳಾದರೂ

ಭಾರತೀಯರಾಗಿದ್ದರೆ, ಐಶ್ವರ್ಯದ ಬಹುಭಾಗವೆಲ್ಲಾ ಒಬ್ಬರ ಕೈಯಿಂದ ಮತ್ತೊಬ್ಬರ ಕೈಗೆ ಓಡಾಡುತ್ತಿದ್ದಿತಲ್ಲದೆ, ರಾಷ್ಟ್ರದ ಎಲ್ಲ ಭಾಗವನ್ನೂ ಹೀಗೆ ಬಹಳವಾಗಿ ಸೋಯಿಸುತ್ತಿರಲಿಲ್ಲ. ಈ ಪರದೇಶದ ಅಧಿಕಾರಿಗಳ ಕೈಗೆ ನಮ್ಮ ದೇಶದ ಆದಾಯದ ಬಹು ಭಾಗವೆಲ್ಲವೂ ಹೋಗುತ್ತಿರುವು ದೆಂಬ ಅಂಶವು, ಇನ್ನೂ ಕೆಲವು ಭಾಗವ ಉಳಿತಾಯದ ರೂಪದಲ್ಲಿಯೂ, ವಿರಾಮ ವೇತನದ ರೂಪದಲ್ಲಿಯೂ ನಮ್ಮ ದೇಶದಿಂದ ಹರಿದುಹೋಗು ತ್ತಿದೆಯೆಂಬ ಅಂಶವೂ, ಹಿಂದೂದೇಶದ ಹಿತಚಿಂತನೆಯಲ್ಲಿ ನಿರತರಾಗಿರುವವ ರೆಲ್ಲರಿಗೂ ಬಹಳ ಚಿಂತಾಜನಕವಾದುದಾಗಿದೆ. ಜೆ ರಾಮ್ಸೆ ಮಾಕ್ಡೊ-ನಾಲ್ಡನು ಈ ವಿರಾಮವೇತನಗಳ ವಿಚಾರವಾಗಿ ಹೇಳಿದ್ದಾನೆ: 'ಪರದೇಶದ[1] ರಾಜ್ಯಭಾರದಲ್ಲಿ ನಡೆಯುತ್ತಿರುವ ಈ ನಿರ್ಜೀವ ವೆಚ್ಚಗಳು ಅನೇಕ ವಿಧವಾಗಿ ಅಪಾಯಕರವಾಗಿವೆ; ಏಕೆಂದರೆ ಅವು ಹಿಂದೂದೇಶದ ಆದಾಯದಿಂದ ಸೆಳೆಯು ಲ್ಪಡುತ್ತವಲ್ಲದೆ ಹಿಂದೂದೇಶದಿಂದಲೇ ಕಸಿದುಕೊಂಡು ಹೋಗುತ್ತಿವೆ.' ಆತನೇ ಮತ್ತೆ ಹೇಳುತ್ತಾನೆ[2] 'ಅದು ಸಾರವಂತವಾಗಿ ಮಾಡುವ ಹಳ್ಳದಿಂದ ಅತ್ಯಾವಶ್ಯಕವಾದ ನೀರಿನ ಬಹು ಭಾಗವನ್ನೇ ತೆಗೆದುಕೊಳ್ಳುವುದರಿಂದ, ಅದನ್ನು ನಿಸ್ಸಾರವಾಗಿಯೂ ನಿರ್ಬಲವಾಗಿಯೂ ನಿಶ್ಚೇತನವಾಗಿಯೂ ಮಾಡುತ್ತಿದೆಯೆಂದೇ ತಿಳಿದುಕೊಳ್ಳಬೇಕು.' ಅವನು ಕೊನೆಯದಾಗಿ ಹೇಳುತ್ತಾನೆ[3] 'ತಮ್ಮ ದೇಶದಿಂದ ಪರದೇಶಕ್ಕೆ ಹರಿದುಹೋಗುವ ಕಪ್ಪ ಕಾಣಿಕೆಗಳ ಐಶ್ವರ್ಯವು ಬಹಳವಾಗಿದ್ದರೆ ಸುಖಸಮೃದ್ಧಿಯು ಎಂದಿಗೂ ಸಾರ್ವ ಜನಿಕವಾಗಿರಲಾರದು' ಎಂದಿರುವರು.

ಹೀಗೆ ನೂರಕ್ಕೆ ೯೩.೯ರಷ್ಟು ಪ್ರಭುತ್ವವ್ಯಯವು ಇದ್ದರೆ, ಅದು ಆದಾಯವನ್ನು ಬರಿದುಮಾಡುತ್ತ, ಅದರಿಂದ ದೇಶಕ್ಕೆ ಆಗುವ ಪ್ರತಿಫಲವು ಏನೂ ಇಲ್ಲೆಂಬುದನ್ನು ನಾವು ಕಾಣುತ್ತಿದ್ದೇವೆ. ಇದರಿಂದ ಜನರ ಸಂಪಾ ದನಾಶಕ್ತಿಯು ಏನೂ ಹೆಚ್ಚದಿರುವುದರಿಂದ, ಅವರಿಗೆ ತಮ್ಮ ಕಷ್ಟಕ್ಕೆ ತಕ್ಕ ಪೂರ್ಣ ಪ್ರತಿಫಲವು ಸಿಗುತ್ತಿಲ್ಲ. ಇಂತಹ ನೀತಿಯನ್ನು ಇನ್ನೂ ಮುಂದು

---

೧ ಶ್ರೀ. ರಾಮ್ಸೆಮಾಕ್ಡೊನಾಲ್ಡರ 'ಹಿಂದೂದೇಶದ ರಾಜ್ಯಭಾರ' ಪುಟ ೧೪೮

೨ ,, ,, ,, ೧೪೮

೩ ,, ,, ,, ೧೪೯

ವರಿಸುತ್ತಿದ್ದರೆ, ಅದು ಆ ದೇಶವನ್ನು ದಾರಿದ್ರ್ಯದಲ್ಲಿ ದೂಡುವುದೇನು ತಪ್ಪದ ಮಾತಲ್ಲ.

## ಪ್ರಭುತ್ವದ ಮುಖ್ಯ ವೆಚ್ಚಗಳು

ಈ ಬಾಬಿನಲ್ಲಾಗುವ ವೆಚ್ಚವು ದೇಶದ ಆರ್ಥಿಕಾಭಿವೃದ್ಧಿಯ ಆವಶ್ಯಕತೆಗೆ ತಕ್ಕಂತೆ ಸಪ್ರಮಾಣದಲ್ಲಿರಬೇಕು. ಯಾವ ಬಾಬೇ ಆಗಲಿ ತನ್ನಷ್ಟಕ್ಕೆ ತಾನು ಎಷ್ಟು ಉತ್ತಮವಿದ್ದರೂ, ದೇಶದ ಹಿತದೃಷ್ಟಿಯಿಂದ ಅದು ಅನಾವಶ್ಯಕವೆಂದು ಕಂಡುಬಂದಾಗ, ಅದು ವ್ಯರ್ಥವಾಗಿಯೇ ಪರಿಣಮಿಸುವುದು. ಹಿಂದೂದೇಶದಂತಹ ರಾಷ್ಟ್ರಕ್ಕೆ ಗ್ರಾಮಾಂತರ ಸಂಚಾರ ಸೌಲಭ್ಯವೂ, ವ್ಯವಸಾಯಿಕ ನೀರಾವರೀ ಸೌಕರ್ಯವೂ ಅತ್ಯಾವಶ್ಯಕವಿದ್ದು, ಆ ಅಭಿವೃದ್ಧಿಕಾರ್ಯಗಳಲ್ಲಿ ಪ್ರಭುತ್ವವು ವೆಚ್ಚಮಾಡಬೇಕಾದುದು ಅಗತ್ಯವಿದೆ. ಹಿಂದೂದೇಶದ ಪ್ರಭುತ್ವವು ನೀರಾವರೀ ಯೋಜನೆಗಳಿಗಾಗಿ ೯೬ ಕೋಟಿ ರೂಪಾಯಿಗಳನ್ನು ವೆಚ್ಚಮಾಡಿದಾಗ, ೧೯೩೫-೩೬ರ ಕೊನೆಗೆ ರೈಲ್ವೆಗಳಿಗಾಗಿ ಖರ್ಚುಮಾಡಿದುದು ೬೨೬ ಕೋಟಿಗಳು.[೧] ಏಷ್ಯಾಖಂಡದಲ್ಲೆಲ್ಲಾ ಹಿಂದೂದೇಶದಲ್ಲಿಯೇ ರೈಲುರಸ್ತೆಯು ಬಹುದೂರ ಮೈಲಿಗಳಿರುವುದು.—೪೮,೫೭೯ ಮೈಲಿಗಳು. ಇನ್ನೂ ಇತರ ಅತ್ಯಗತ್ಯ ಅವಸರಗಳನ್ನು ಅಲಕ್ಷ್ಯಮಾಡಿ, ರೈಲ್ವೆಯ ನಿರ್ಮಾಣವನ್ನು ಮೊದಲು ಮಾಡಿ, ಅದಕ್ಕಾಗಿ ಎಲ್ಲೆಲ್ಲಿದ್ದ ಎಲ್ಲ ಆದಾಯದ ಆಶ್ರಯಗಳನ್ನೂ ಬರಿದುಮಾಡಿದರು. 'ಆದರೆ, [೨] ಸಾಲವಾಗಿ ತಂದ ಬಂಡವಾಳದಿಂದ, ರೈಲ್ವೆ ಮತ್ತು ಇತರ ಕಾಮಗಾರಿಗಳು ಯುದ್ಧಕಚೇರಿಯಲ್ಲಿ ಯುಕ್ತಿಯಿಂದ ಕಲ್ಪಿಸಲ್ಪಟ್ಟ ಪ್ರಕಾರ ನಡೆಸಲ್ಪಟ್ಟುವಲ್ಲದೆ ಅದು ರಾಜ್ಯಾದಾಯವನ್ನು ಎಣಿಕೆಮಾಡುವ ಸ್ಥಳದಿಂದ ನಿಯಂತ್ರಿತವಾಗಲಿಲ್ಲ; ಹಾಗೆಯೇ ಸೈನ್ಯದ ವೆಚ್ಚವೂ ಸಹ ರೈಲ್ವೆ ಅಭಿವೃದ್ಧಿಯಂತೆ ಕಪಟನಾಟಕವಾಗಿರುವುದು' ಎಂದು ಮಾಕ್ಡೊನಾಲ್ಡರು ಹೇಳಿರುವರು. ಈ ಉದ್ಗಾರದಿಂದ ಅದರ ಕಾರಣವು ಚೆನ್ನಾಗಿ ಅರ್ಥವಾಗುತ್ತಿದೆ.

ಇದು ಸೈನ್ಯದ ದೃಷ್ಟಿಯಿಂದ ಮಾತ್ರವಲ್ಲದೆ, ಈ ನೀತಿಯು ಇಂಗ್ಲೆಂಡಿನಲ್ಲಿರುವ ಉಕ್ಕಿನ ಕಾರಖಾನೆಗಳಿಗೆಲ್ಲಕ್ಕೂ ಬೇಕಾದಷ್ಟು ಕೆಲಸವನ್ನು ಒದ

---

೧ ಬ್ರಿಟಿಷ್ ಹಿಂದೂಸ್ತಾನದ ಅಂಕಿ ಅಂಶಗಳ ಗೋಷ್ವಾರೆ ಪುಟ. ೨೧೬

೨ ಶ್ರೀ. ಮಾಕ್ಡೊನಾಲ್ಡರ 'ಹಿಂದೂದೇಶದರಾಜ್ಯಭಾರ' ಪುಟ. ೧೫೧

ಗಿಸುವುದರಲ್ಲಿ ನೆರವಾಯಿತು. ಇಷ್ಟೇ ಅಲ್ಲದೆ ಹಿಂದೂದೇಶದಿಂದ ಇಂಗ್ಲೆಂಡಿಗೆ ಸಮುದ್ರಮಾರ್ಗವಾಗಿ ಬಂದರುಗಳ ಮೂಲಕ ಕಚ್ಚಾ ಪದಾರ್ಥಗಳನ್ನು ಸಾಗಿಸುವುದಕ್ಕೆ ಅನುಕೂಲವಾಗುವಂತೆಯೂ, ಅಲ್ಲಿ ಸಿದ್ಧಪಡಿಸಿದ ವಸ್ತುಗಳನ್ನು ವಿದೇಶದಿಂದ ತಂದು ನಮ್ಮ ದೇಶದೊಳಕ್ಕೆ ಇಳಿಸುವುದಕ್ಕೆ ಸುಲಭವಾಗುವಂತೆಯೂ, ಹಾಗೆ ಆಮದಾದ ವಸ್ತುಗಳಿಗೆ 'ವಿವೇಚನಾಪೂರಿತ'ವಾಗಿ[1] ಹಾಕಿದ್ದ ದರಗಳನ್ನೂ, 'ಸಾಮೂಹಿಕ ಕ್ರಯ'ಗಳನ್ನೂ ವಿಧಿಸುವುದರಲ್ಲಿಯೂ ಬಹಳ ಸಹಾಯಕಾರಿಯಾಗಿದ್ದಿತು. ಈ ಪದ್ಧತಿಯು ಹೇಗೆ ಆಚರಣೆಯಲ್ಲಿಡಲ್ಪಟ್ಟಿತೆಂಬುದನ್ನು ತೋರಿಸಲು ಕೆಲವು ನಿದರ್ಶನಗಳನ್ನು ತೋರಿಸಬೇಕೆಂದರೆ, ಬೆಂಕಿಯ ಕಡ್ಡಿಯ ತಯಾರಿಕೆಯಂತಹ ಯಾವುದಾದರೊಂದು ಪುಟ್ಟ ಕೈಗಾರಿಕೆಯನ್ನು ಮೊದಲು ಪರೀಕ್ಷಿಸೋಣ: ಬೊಂಬಾಯಿಂದ ದೆಹಲಿಗೆ ಆಮದಾಗಿ ಕಳುಹಿಸಿದ ಬೆಂಕಿಯ ಕಡ್ಡಿಗಳಿಗೂ, ಮುನ್ನೂರು ಮೈಲಿಯ ದೂರವೂ ಅದರಿಂದ ಅದರ ಸರಬರಾಯಿ ವೆಚ್ಚವು ಕಡಿಮೆಯಿದ್ದರೂ ಸಹ ಅಹಮದಾಬಾದಿನಲ್ಲಿ ತಯಾರಿಸಿದ ಬೆಂಕಿ ಕಡ್ಡಿಗಳಿಗೆ ಅಹಮದಾಬಾದಿನಿಂದ ದೆಹಲಿಗೆ ಕಳುಹಿಸಿದರೂ ಒಂದೇ ಸಮನಾದ ದರವು ವಿಧಿಸಲ್ಪಟ್ಟಿರುವುದು. 'ಬೊಂಬಾಯಿಂದ ಅಹಮದಾಬಾದಿಗೆ ರವಾನಿಸಲು ಆಗುವ ಮಾರ್ಗವೆಚ್ಚವೆಲ್ಲವೂ ಆ ವಿದೇಶೀಯ ವ್ಯಾಪಾರಸ್ಥನ ಅಲ್ಲಿಯ ಕಾರಖಾನೆಯ ಮಾಲೀಕನಿಗೆ ಕೊಡಲ್ಪಟ್ಟ ಔದಾರ್ಯ[2] ವಾಗಿರುವುದೆಂಬದನ್ನು ನಾವು ಸತ್ಯವಾಗಿಯೂ ಹೇಳಬಲ್ಲೆವು. ಅಹಮದಾಬಾದಿನ ಕಡ್ಡಿಯ ಕಾರಖಾನೆಯ ಒಡೆಯರು ಹತ್ತಾರು ವರುಷಗಳು ಒಂದೇ ಸಮನಾಗಿ ಸರಕಾರದೊಂದಿಗೆ ಹೋರಾಡಿದುದರಿಂದ ಅಹಮದಾಬಾದಿನಿಂದ ಮಣಕ್ಕೆ ರೂ. ೨-೨-೧೧ಕ್ಕೂ, ಬೊಂಬಾಯಿನಿಂದ ರೂ. ೩-೭-೬ಗೂ ಇಳಿಸಲ್ಪಟ್ಟಿತು.

ಇನ್ನು ಸಕ್ಕರೆಯ ಕೈಗಾರಿಕೆಯಂತಹ ನಮ್ಮದೇ ದೇಶದ ಕೈಗಾರಿಕೆಯನ್ನು ಪರಿಶೀಲಿಸಿದಾಗ, ಬೊಂಬಾಯಿನಿಂದ ಕಾನಪುರಕ್ಕೆ ಇರುವ ೮೪೦ ಮೈಲಿಗಳಿಗೂ, ಪರದೇಶದಿಂದ ಆಮದಾದ ಸಕ್ಕರೆಗೆ ಮಣಕ್ಕೆ ೦-೧೩-೬

---

೧ ಶ್ರೀ. ಯಂ. ಬಿ. ಮೆಹತಾರವರ 'ಹಿಂದೂದೇಶದ ರೈಲ್ವೆಗಳು : ದರಗಳು ಮತ್ತು ನಿರ್ಬಂಧಗಳು' ಪುಟ. ೧೩೪-೫

೨ ,, ,, ಪುಟ ೧೪೯

ಯಂತೆ ವೆಚ್ಚ ತಗುಲುವುದೆಂದೂ, ೬೪೯ ಮೈಲಿ ಮಾತ್ರವುಳ್ಳ ಕಾನಪುರದಿಂದ ಅಕೋಲಾಕ್ಕೆ ನಮ್ಮ ಸ್ವದೇಶೀ ಸಕ್ಕರೆಗೆ ರೂ. ೧-೨-೪ ಮಣವೊಂದಕ್ಕೆ ವೆಚ್ಚ ಬರುತ್ತದೆಂಬುದನ್ನು ನಾವು ಕಾಣುತ್ತಿರುವೆವು. ಹೀಗಿದ್ದರೂ ಕೂಡ, ಪರದೇಶದಿಂದ ಬಂದ ಪದಾರ್ಥಕ್ಕೆ ಬೆಲೆಯಧಿಕವಾಗಿಯೂ, ನಮ್ಮ ದೇಶದಲ್ಲಿ ತಯಾರಿಸಿದ ವಸ್ತುವಿಗೆ ಅಗ್ಗದ ಬೆಲೆಯಾಗಿಯೂ ಇರುವುದು; ಇವೆರಡಕ್ಕೂ ಮಾರ್ಗವೆಚ್ಚವನ್ನು ಮಾತ್ರ ಹಾಕುವ ತತ್ವರೀತ್ಯಾ ಮೊದಲು ಹೇಳಿದ ವಿದೇಶಿಯ ವಸ್ತುವಿಗೇ ಬೆಲೆಯಧಿಕವಾಗಿರಬೇಕಾಗಿತ್ತು. ಮತ್ತೆ ಬೊಂಬಾಯಿನಿಂದ ಬಾರ್ಸಿಗೆ ಅಪ್ಪಟ ಸಕ್ಕರೆಗೆ ಮಣವೊಂದಕ್ಕೆ ೬ ಆಣೆ ಯಂತೆಯೂ, ಅದೇ ಬೆಲ್ಲಕ್ಕೆ ಬಾರ್ಸಿಯಿಂದ ಬೊಂಬಾಯಿಗೆ ಮಣವೊಂದಕ್ಕೆ ೦-೯-೯--ನೂರಕ್ಕೆ ೫೦ರಷ್ಟು ಹೆಚ್ಚಿನ ದರವು ವಿಧಿಸಲ್ಪಟ್ಟಿರುವುದು. ಸರ್ ಮೊಹತಾರವರು, ‘ ಸ್ವದೇಶೀಸಕ್ಕರೆಗಿಂತಲೂ ವಿದೇಶೀಯ ಸಕ್ಕರೆ ಕಡಿಮೆಯ ದರವನ್ನು ಹಾಕಿದುದಲ್ಲದೆ, ದೇಶದಾದ್ಯಂತ ಬಡವರೆಲ್ಲರಿಂದಲೂ ಕೊಳ್ಳಲ್ಪಟ್ಟು ಉಪಯೋಗಿಸಲ್ಪಡುವ ಅಗ್ಗದ ವಸ್ತುವಾದ ಬೆಲ್ಲಕ್ಕಿಂತಲೂ ವಿದೇಶೀಯ ಸಕ್ಕರೆಗೆ ಕಡಿಮೆಯ ದರವು ಕೊಡಲ್ಪಟ್ಟಿರುವುದು ’ ಎಂದು ಹೇಳಿರುವರು.

ಹಿಂದೂದೇಶದಲ್ಲಿಯೇ ಐರೋಪ್ಯರಿಂದ ನಡೆಸಲ್ಪಡುವ ವ್ಯಕ್ತಿ ಕೇಂದ್ರ ಗಳಿಗೆ ಕೊಡಲ್ಪಡುತ್ತಿರುವ ಪಕ್ಷಪಾತದ ರಕ್ಷಣೆಯನ್ನು ಕುರಿತು, ಸ್ವದೇಶೀಯ ಹತ್ತಿಯ ಕೈಗಾರಿಕೆಗಳ ಕೇಂದ್ರವಾದ ದೆಹಲಿಗೂ, ಐರೋಪ್ಯ ಜನಾಂಗದವರಿಗೆ ಹತ್ತಿಯ ಕೈಗಾರಿಕೆಯ ಕೇಂದ್ರವಾದ ಕಾನ್ಪುರಕ್ಕೂ ರೈಲ್ವೆಯ ದರಗಳಲ್ಲಿರುವ ವ್ಯತ್ಯಾಸದ ನಿದರ್ಶನದ ಉದಾಹರಣೆಯೊಂದನ್ನು ನಾವು ಪರಿಶೀಲಿಸೋಣ: ಕಾನ್ಪುರದಿಂದ ೨೩೬ ಮೈಲಿಗಳ ದೂರವಿರುವ ಚೌಡಾನಿಯಿಂದ ಕಾನ್ಪುರಕ್ಕೆ ಅರಳಿಗೆ ಮಣವೊಂದಕ್ಕೆ ೫ ಆಣೆಯ ದರವು ಇರುವುದು; ಆದರೆ ದೆಹಲಿಯಿಂದ ೧೨೮ ಮೈಲಿಗಳಿರುವ ಅದೇ ಚೌಡಾನಿಗೇ ಮಣವೊಂದಕ್ಕೆ ೦-೬-೭ ದರವಿರುವುದು. ಸರ್ ಮೊಹತಾರವರು ‘ ಈ ಪಕ್ಷಪಾತದ ವರ್ತನೆಯಿಂದ ದೆಹಲಿಯಲ್ಲಿರುವ ಕೆಲವು ಹತ್ತಿಯ ಗಿರಣಿಗಳು ಮುಚ್ಚಲ್ಪಡಬೇಕಾಗಿ ಬಂದುವು ’ ಎಂದು ತಿಳಿಸಿರುವರು.[1]

---

[1] ಶ್ರೀ. ಯನ್. ಬಿ. ಮೊಹತಾರವರ ‘ ಹಿಂದೂದೇಶದ ರೈಲ್ವೆಗಳು: ಅವುಗಳ ದರಗಳು ಮತ್ತು ನಿರ್ಬಂಧಗಳು. ’ ಪುಟ. ೧೪೯

ಇದೇ ವಿಧವಾದ ಸೌಲಭ್ಯಗಳೇ ಹಸಿಯ ಚರ್ಮಗಳಿಗೆ, ಗೋದಿಗೆ ಇನ್ನೂ ಇತರ ವಸ್ತುಗಳಿಗೆ ಸ್ವದೇಶೀಯ ವ್ಯಕ್ತಿಕೇಂದ್ರಗಳಿಗೆ ಸರಬರಾಯಿ ಯಾಗುವುದಕ್ಕಿಂತ ವಿದೇಶಕ್ಕೆ ಹೋಗಲು ಸುಲಭವಾಗುವ ಬಂದರುಗಳಿಗೆ ಸಾಗಿಸಲು ಸಿಕ್ಕಿದ್ದುವು. ಶ್ರೀ. ಘೋಷರವರು ಈ ಪಕ್ಷಪಾತದ ದರವನ್ನು ವಿಧಿಸುವುದನ್ನು ವಿಮರ್ಶಿಸುತ್ತಾ, 'ಅದು ಹಿಂದೂದೇಶದ ಸರಕಾರದಿಂದ ಪರದೇಶದ ಗಿರಣಿಯ ಸಾಹುಕಾರನಿಗೆ ಸಲ್ಲಿಸಲ್ಪಡುತ್ತಿದ್ದ ಸಹಾಯ ದ್ರವ್ಯ ವೆಂದು[೧]' ವರ್ಣಿಸಿರುವರು.

ಪ್ರಯಾಣದ ಸರಬರಾಯಿಯ ಸೌಕರ್ಯಗಳನ್ನು ಪಡೆದಿರುವುದರಿಂದ ಆಗುವ ಉಪಯೋಗಗಳನ್ನು ಯಾರೂ ಅಲ್ಲಗಳೆಯದಿದ್ದರೂ, ಈಗಿನ ಆರ್ಥಿಕ ಪರಿಸ್ಥಿತಿಯಲ್ಲಿ ತನಗೆ ಅಗತ್ಯವಿರುವುದಕ್ಕಿಂತಲೂ ಬಹಳ ಹೆಚ್ಚಾಗಿ ಈ ಪದ್ಧತಿಯು ಹಿಂದೂದೇಶಕ್ಕೆ ಹೊರೆಯನ್ನು ಹೇರಿದೆ. ಸಾಮಾನ್ಯವಾಗಿ ರೈಲ್ವೆಯ ಸೌಕರ್ಯದ ಅಭಿವೃದ್ಧಿಯಿಂದ ಆರ್ಥಿಕ ಆವಶ್ಯಕತೆಗಳು ಹೆಚ್ಚಬೇಕು; ಆದರೆ ಹಿಂದೂದೇಶದಲ್ಲಿ, ಅದು ಮತ್ತಷ್ಟು ಮುಂದುವರಿದಿದೆ; ಆದುದರಿಂದ ಅದು ತನಗೆ ಅಗತ್ಯವಾದುದನ್ನು ಕೊಡಲು ಚೈತನ್ಯವಿಲ್ಲದೆ, ಅದರ ಪರಿಣಾಮವಾಗಿ ರಾಜ್ಯಾದಾಯದ ಬಹು ಭಾಗವೆಲ್ಲವೂ ಈ ಅಪ್ರಾಕೃತಿಕ ಪರಾಧಾರದ ಬೆಳವಣಿಗೆಗೆ ವೆಚ್ಚವಾಗುತ್ತ ಅವು ನಡೆದುಕೊಂಡುಹೋಗಲು ತಿರುಗಿಸಬೇಕಾಗಿರುವುದು. ಇದಲ್ಲದೆ ಯಾವುದೇ ಪರಿಣಾಮಕಾರಿಯಾದ ಸಾಧನವನ್ನು ಉಪಯೋಗಿಸುವ ವಿಧಾನವೇ ಅದರಿಂದುಂಟಾಗುವ ಲಾಭಗಳನ್ನು ನಿರ್ಧರಿಸುತ್ತದೆ. ಈ ಮೇಲೆ ಹೇಳಿದ ಮಾದರಿಗಳಿಂದ, ಹಿಂದೂದೇಶಕ್ಕೆ ರೈಲ್ವೆಗಳಿಂದ ಯಾವ ವಿಧವಾದ ಪರಿಶುದ್ಧವಾದ ಆಶೀರ್ವಾದವೂ ಆಗಿಲ್ಲವೆಂಬುದು ತಿಳಿದ ಅಂಶವಾಗಿದೆ. ನಮಗೆ ಬಹಳ ಸ್ವಲ್ಪ ಪರಿಮಿತವಾದ ಬಂಡವಾಳ ಇರುವಾಗ, ಆ ಬಂಡವಾಳವು ದೇಶದ ಹಿತಕ್ಕೆ ಅತ್ಯಂತ ಮುಖ್ಯವಾದ ವ್ಯವಸಾಯದ ಅಭಿವೃದ್ಧಿಗೂ, ಪ್ರಯಾಣಸೌಕರ್ಯಕ್ಕೂ ಅನುಕೂಲವಾಗುವ ಕಾಲುವೆಗಳನ್ನು ನಿರ್ಮಾಣಮಾಡುವುದನ್ನೂ, ಆರೋಗ್ಯ ನೈರ್ಮಲ್ಯಕಾರ್ಯಗಳನ್ನು ಏರ್ಪಡಿಸುವುದನ್ನೂ ಇತ್ಯಾದಿ ಸೌಕರ್ಯಗಳನ್ನುಂಟುಮಾಡುವು

---

೧ ಭಾರತೀಯ ರೈಲ್ವೆಯ ಆರ್ಥಿಕ ಸ್ಥಿತಿಯ ಮೇಲೆ ಕೊಟ್ಟಿರುವ ಉಪನ್ಯಾಸಗಳು. ಭಾಗ ೨ ಪುಟ ೩೬.

ದನ್ನು ಬಿಟ್ಟು, ದುಂದುತನದಿಂದ ರೈಲುಮಾರ್ಗಗಳನ್ನು ಹಾಕುವುದಕ್ಕಾಗಿ, ಅವನ್ನು ನಡೆಸುವುದಕ್ಕಾಗಿ ವೆಚ್ಚಮಾಡಲ್ಪಟ್ಟಿರುವುದು. ಸರಕಾರವು ಈ ವಿಶೇಷಾಭಿವೃದ್ಧಿಯು, ಆತುರತೆಯಿಂದ ನಿಮಿಷಮಾತ್ರದಲ್ಲಿ ಹೊರಬಂದ 'ನ್ಯಾಯಮಾರ್ಗದ ತಪ್ಪುಹಾದಿಯ ಅವಲಂಬನೆ'ಯೆಂದು ಎಂದೂ ಕ್ಷಮಾಪಣೆಯನ್ನು ಬೇಡಿಕೊಳ್ಳಲಾರದು; ಆದರೆ ವರ್ಷವರ್ಷವೂ ದೇಶದಾದ್ಯಂತವೂ ಪ್ರಜೆಗಳೆಲ್ಲರೂ ಈ ಪದ್ಧತಿಯನ್ನು ಟೀಕಿಸುತ್ತಿದ್ದರೂ ಅದೇ ರೀತಿಯನ್ನೇ ಪ್ರಭುತ್ವವು ಛಲದಿಂದ ಆಚರಣೆಯಲ್ಲಿಟ್ಟೇ ಇರುವುದು.

ಪ್ರಪಂಚದ ಆದ್ಯಂತವೂ ರೈಲ್ವೆಯ ಇತಿಹಾಸದಲ್ಲಿ ಈ ಪಕ್ಷಪಾತದ ದರದ ವ್ಯತ್ಯಾಸಗಳೇನೂ ಹೊಸವಲ್ಲ. ಅಮೇರಿಕದ ಸಂಯುಕ್ತಸಂಸ್ಥಾನಗಳಲ್ಲಿಯೂ ಇನ್ನೂ ಇತರ ದೇಶಗಳಲ್ಲಿಯೂ ವೈಯ್ಯಕ್ತಿಕ ಕಾರ್ಯಾಚರಣೆಯೂ ಅವರ ದುರಾಶೆಯೂ ಇದಕ್ಕೆ ಮೂಲಕಾರಣಗಳಾಗಿವೆ; ಆದರೆ ಹಿಂದೂದೇಶದಲ್ಲಿ, ವಿನಾಶಕಾರಕ ಸಂಗತಿಯೆಂದರೆ, ಸರಕಾರವು ರೈಲ್ವೆಗಳಿಗೆ ಸಹಾಯಮಾಡುತ್ತ, ಅದರ 'ಪಾರುಪತ್ತೇಗಾರ'ನಂತೆ ತಾನೇ ಮುಂದೆ ಬಿದ್ದು ಅದನ್ನು ತನ್ನ ಕೈಯಲ್ಲಿಟ್ಟುಕೊಂಡಿರುವುದರಲ್ಲಿದೆ; ಆದಕಾರಣ ಪ್ರಭುತ್ವದ ಈ ವರ್ತನೆಯು ಕಂದಾಯಕೊಡುವ ಭಾರತೀಯ ಪ್ರಜೆಗೆ ತಾನು ಸಲ್ಲಿಸಬೇಕಾದ ಕರ್ತವ್ಯದಲ್ಲಿ ತೋರಿಸುವ ಅಲಕ್ಷ್ಯದ ಮಹಾಪರಾಧವಾಗಿದೆ.

ಸುಪ್ರಸಿದ್ಧ ಅರ್ಥಶಾಸ್ತ್ರಜ್ಞರಾದ ಡಿ. ಇ. ವಾಚಾರವರು ತಮ್ಮ ಅಭಿಪ್ರಾಯವನ್ನು ಹೀಗೆ ತಿಳಿಸಿರುವರು: [೧] 'ರೈಲ್ವೆ ಪ್ರಭುತ್ವದ ಸಾಲದ ಮೇಲೆ ವರುವರುಷವೂ ಬೆಳೆಯುತ್ತಿರುವ ವೆಚ್ಚವನ್ನು, ಅದರ ಸಂಪೂರ್ಣ ಹೊರೆಯನ್ನು, ದೇಶದಲ್ಲಿ ಶಾಶ್ವತವಾಗಿ ನೆಲಸಿರುವ ಭಾರತೀಯ ಪ್ರಜಾಸಮುದಾಯವೆಲ್ಲವೂ, ನೇರವಾಗಿಯೋ ಇಲ್ಲವೇ ಬೇರೆಯ ರೂಪದಲ್ಲಿಯೋ ಆ ಹೊರೆಯನ್ನು ಹೊತ್ತುಕೊಂಡಿರುವುದು. ಯಾವುದಾದರೂ ಹಿತಚಿಂತನೆಯನ್ನು ನಾವು ವಿಚಾರಮಾಡಬೇಕೆಂದಿದ್ದರೆ, ಇಲ್ಲಿ ಶಾಶ್ವತವಾಗಿ ವಾಸಮಾಡಿಕೊಂಡಿರುವ, ತಾವು ಕಷ್ಟಪಟ್ಟು ದೇಶದ ಸುಖಕ್ಕಾಗಿ ಕಂದಾಯ

---

೧ ಶ್ರೀ. ಡಿ. ಇ. ವಾಚಾರವರ 'ಹಿಂದೂದೇಶದ ರೈಲ್ವೆಗಳ ಆರ್ಥಿಕಸ್ಥಿತಿ' ಪು. ೬೦

ಕಾಣಿಕೆಗಳನ್ನು ಸಲ್ಲಿಸುತ್ತಿರುವ ಪ್ರಜಾಕೋಟಿಯ ಹಿತವನ್ನು ನಾವು ಆಲೋಚಿಸಬೇಕಾಗಿದೆಯಲ್ಲದೆ ಇಂದಿಲ್ಲಿದ್ದು ನಾಳೆ ಹೊರಟುಹೋಗುವ ವಿದೇಶೀಯ ಸ್ವಾರ್ಥಪರರ ಕೆಲವು ಮಂದಿಯ ಹಿತದೃಷ್ಟಿಯನ್ನು ಮಾಡಬೇಕಾಗಿಲ್ಲ. ಏಕೆಂದರೆ ಅವರು ಹಿಂದೂದೇಶವನ್ನು ತಮ್ಮ ವ್ಯಾಗಯಾವಿಹಾರ ಕ್ಷೇತ್ರವೆಂದು ಭಾವಿಸಿರುವರು. ಕೋಟ್ಯಾನುಕೋಟಿ ಸ್ವದೇಶೀಯ ಪ್ರಜಾಸಮುದಾಯದ ಸುಖವನ್ನೇ ನಿರ್ಲಕ್ಷ್ಯಮಾಡಿ, ಕೇವಲ ಅತ್ಯಲ್ಪಸಂಖ್ಯಾಕರಾದವರ ಕ್ಷೇಮವನ್ನೇ ಮುಖ್ಯ ಗುರಿಯನ್ನಾಗಿಟ್ಟುಕೊಂಡು ತವಕದಿಂದ ನಡೆಯಿಸುತ್ತಿರುವ ಈ ರೈಲ್ವೆಯ ಆಡಳಿತ ವಿಧಾನದ ನೀತಿಯು ಎಳ್ಳಷ್ಟೂ ಕ್ಷಮಾರ್ಹವಾದುದಲ್ಲ. ಒಟ್ಟಿನಲ್ಲಿ, ಇನ್ನೂ ಅನೇಕ ವಿಚಾರಗಳಲ್ಲಿರುವಂತೆ, ರೈಲ್ವೆಯ ಆಡಳಿತ ವಿಧಾನದಲ್ಲಿಯೂ ಸಹ, ಆಟವಾಡುವವರೂ ಸುಖಪಡುವವರೆಲ್ಲರೂ ವಿದೇಶೀಯ ಸ್ವಾರ್ಥಪರ ಸಾಹುಕಾರಗಳೇ ವಿನಾ, ನಮ್ಮ ದೇಶದ ತೆರಿಗೆ ತೆರುವ ಪ್ರಜೆಯು ಅವನು ಆಟವಾಡಲು ಸುಖದಿಂದಿರಲು ತಾನು ದುಡಿದುಕೊಡಬೇಕಾಗಿದೆ.'

ವಿಲಿಯಂ ಡಿಗ್ಬಿಯು[೧] ಬರೆಯುವಂತೆ, 'ರೈಲ್ವೆಗಳು ದೇಶದ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಪದಾರ್ಥಗಳನ್ನು ರವಾನಿಸಲು ಸೌಕರ್ಯಗಳನ್ನುಂಟುಮಾಡಿವೆ; ಆದರೆ ಅವೇನೂ ಸಂಪಾದನೆಯಲ್ಲಿ ಅಭಿವೃದ್ಧಿಯನ್ನು ತಂದುಕೊಟ್ಟಿಲ್ಲ; ಹಾಗಲ್ಲದೆ ಅವು ನಮ್ಮ ದೇಶದ ಬೆಳೆಯನ್ನು, ಆ ಸಂಪತ್ತನ್ನು, ನಮ್ಮ ದೇಶದಿಂದ ಹೊರಕ್ಕೆ ತೆಗೆದುಕೊಂಡುಹೋಗಿವೆ; ಆದರೆ ಆದರಿಂದ ಗಳಿಸಿದ ಅತ್ಯಲ್ಪ ಲಾಭಸಂಪಾದನೆಯು ಮಾತ್ರ ಹಿಂದೂದೇಶದ ನಿವಾಸಿಗಳಿಗೆ ಉಪಯೋಗವಾಗಿ, ಆದರ ಬಹುಭಾಗವು ದೇಶಕ್ಕೇ ಒಂದು ನಿತ್ಯ ಸತ್ಯ ವೇದನೆಯಾಗಿದೆ. ಇಂಗ್ಲೆಂಡಿನಲ್ಲಿ ವೃದ್ಧಿಯಾಗುತ್ತಿರುವ ವೆಚ್ಚಗಳನ್ನು ಸರಿತೂಗಿಸಲು ಹೆಚ್ಚುಹೆಚ್ಚಾಗಿ ವಸ್ತುಗಳೂ ವ್ಯಕ್ತಿಗಳೂ ಅವಶ್ಯವಾಗಿ, ಆದರಲ್ಲಿಯೂ ಬಹುಮಟ್ಟಿಗೆ ರೈಲ್ವೆಗಳಿಗೇ ಅಗತ್ಯವಾಗಿವೆ; ಅದೇ ರೈಲ್ವೆಗಳೇ ತಮ್ಮ ಜನರನ್ನು ಉದ್ಯೋಗನಿರತರಾಗಿಯೂ ವಸ್ತುನಿರ್ಮಾಪಕರಾಗಿಯೂ ಮಾಡಲು ಯಾವ ದೇಶದ ವಸ್ತುವಿಜ್ಞಾನವನ್ನೂ ಸರಬರಾಯಿ

[೧] ಶ್ರೀ. ವಿಲಿಯಂ ಡಿಗ್ಬಿಯವರ 'ಹಿಂದೂದೇಶದ ವಿನಾಶ' ಪುಟ. ೯

ಮಾಡಿದ ಅದೇ ರೈಲುಗಳೇ, ಆ ದೇಶಕ್ಕೆ ವಿನಾಶವನ್ನೂ ಹಾನಿಯನ್ನೂ ಉಂಟುಮಾಡಿರುವುವು.'

ಸಮುದ್ರರೇವುಗಳಿಗೆ ಹಾಕಲ್ಪಟ್ಟ ರೈಲ್ವೆಯ ಮುಖ್ಯ ಮಾರ್ಗಗಳು ಎಷ್ಟೇ ಅಭಿವೃದ್ಧಿಸ್ಥಿತಿಗೆ ಬಂದಾಗ್ಯೂ, ಗ್ರಾಮಾಂತರ ಆರ್ಥಿಕ ಜೀವನದ ಅಭಿವೃದ್ಧಿಯಲ್ಲಿ ಅತ್ಯಂತ ಮುಖ್ಯವಾದ ಸಣ್ಣ ರೈಲುಮಾರ್ಗಗಳೂ, ಕಾಲುವೆಗಳೂ ಬಹಳ ವ್ಯಸನಕರವಾದ ಸ್ಥಿತಿಯಲ್ಲಿಡಲ್ಪಟ್ಟು ನಿರ್ಲಕ್ಷಿಸಲ್ಪಟ್ಟಿರುವುವು.[೧] ಪ್ರಭುತ್ವವು ಅನೇಕ ಐರೋಪ್ಯ ರಾಜಕೀಯ ಸಂಸ್ಥೆಗಳ ತೊಂದರೆಗೆ ತಲೆಬಾಗಿದೆಯಾದರೂ ಭಾರತೀಯ ಪ್ರಜೆಗಳ ಅಚೇತನವಾದ ಸಣ್ಣ ಧ್ವನಿಯನ್ನು ಕೇಳುವುದಕ್ಕೆ ಸಹ ತಪ್ಪಿಬಿಟ್ಟಿದೆ.

ಹಿಂದೂದೇಶದಲ್ಲಿ ಈಗೀಗ ಕೆಲವು ಕಾಲದ ಹಿಂದೆ, ಮೇಲೆಮೇಲೆ ಸಂಭವವಾದ ಕ್ಷಾಮಗಳು ಸ್ವಲ್ಪ ದೂರದ ಜವಾಬ್ದಾರಿಯನ್ನು ರೈಲ್ವೆಗಳ ತೀವ್ರ ಅಭಿವೃದ್ಧಿಗೇ ನಾವು ಹೊರಿಸಬೇಕಾಗಿದೆ. ದೂರದ ವ್ಯಾಪಾರ ಕೇಂದ್ರಗಳಿಗೆ ನಮ್ಮ ದೇಶದ ದವಸ ಧಾನ್ಯಗಳ ಸಂಗ್ರಹವೆಲ್ಲವೂ ಸೆಳೆಯಲ್ಪಟ್ಟಿದೆ. ರೈಲ್ವೆಗಳು ಸಂಪದ್ಯುಕ್ತವಾದ ಪ್ರಾಂತಗಳಿಂದ ಕ್ಷಾಮಪೀಡಿತ ಪ್ರದೇಶಗಳಿಗೆ ಆಹಾರಸಾಮಗ್ರಿಗಳನ್ನು ಒದಗಿಸುವುದರಲ್ಲಿ ಸಾಧನವಾದುವೆಂಬುದೇನೋ ಸತ್ಯವಾದುದು; ಇದೊಂದು ಪರಿಹಾರ. ಕಂದಾಯವನ್ನು ಕೊಡುವುದರ ಒತ್ತಾಯಕ್ಕಾಗಿ, ತನಗಿರುವ ಆಧಾರ ಆಶ್ರಯಗಳೆಲ್ಲವನ್ನು ಶೋಧಿಸಿ ಅದನ್ನು ಮಾರಾಟಮಾಡಬೇಕಾದುದನ್ನು ತಡೆಗಟ್ಟಬೇಕಾಗಿದೆ; ಅಗ್ಗವಾದ ರೈಲ್ವೆಯ ಸರಬರಾಯಿ ಸೌಕರ್ಯವು ಪರದೇಶದ ರೈಲ್ವೆಯ ವ್ಯವಸ್ಥಾಪಕರಿಗೇ ಸಹಾಯಕಾರಿಯಾಗಿದೆ; ಅಲ್ಲದೆ ಅನೇಕ ಸಂದರ್ಭಗಳಲ್ಲಿ ಅವರೇ ಸುಗ್ಗಿಯಾಗುವುದಕ್ಕೆ ಮುಂಚಿತವಾಗಿಯೇ ಭೂಮಿಯಲ್ಲಿದ್ದ ಬೆಳೆಯನ್ನೇ ಕೊಂಡುಬಿಡುವರು. ಹೀಗೆ ಹರಿದುಹೋಗುವುದರ ಜತೆಗೆ, ಪದಾರ್ಥಗಳ ಅಭಾವವಾಗಿ ಬೆಲೆಗಳು ಏರುತ್ತವೆ.

ಬಹುಮಟ್ಟಿಗೆ ಸೈನ್ಯದ ಸೌಕರ್ಯಕ್ಕಾಗಿ ರೈಲುಮಾರ್ಗಗಳನ್ನು ನಿರ್ಮಾಣ ಮಾಡುವುದರಲ್ಲಿ ಹೇಗೆ ಹೇರಳವಾದ ಹಣವು ವ್ಯಯಮಾಡಲ್ಪಟ್ಟಿತೆಂಬು

---

೧ ಶ್ರೀ ರಾಧಾಕಮಲ ಮುಖರ್ಜಿಯವರ 'ಹಿಂದೂದೇಶದ ಗ್ರಾಮಾಂತರಗಳ ಆರ್ಥಿಕ ಸ್ಥಿತಿ' ಪುಟ. ೨೨೫.

ದನ್ನು ನಾವು ನೋಡುತ್ತಿರುವೆವು; ಅಲ್ಲದೆ ವ್ಯಾಪಾರದ ಹಿತದೃಷ್ಟಿಯಿಂದ ಆಲೋಚಿಸಿದಾಗಲೂ, ಅಲ್ಲಿಯೂ ವಿದೇಶೀಯ ವರ್ತಕರ ಮತ್ತು ಗಿರಣಿ ಕಾರರ ಪ್ರಾಬಲ್ಯವನ್ನೇ ನಾವು ಕಾಣುತ್ತಿರುವೆವು. ಯಾವ ವಿಧದ ನೀತಿಯೇ ಆಗಲಿ, ತತ್ಸನೇ ಆಗಲಿ, ಭಾರತೀಯ, ಬಡ ತೆರಿಗೆಕೊಡುವವನ ಹಿತಕ್ಕಾಗಿ ಕೇಂದ್ರೀಕೃತವಾಗಿಲ್ಲ; ಅಲ್ಲದೆ ಅವು ಆವನ ಸಂಪಾದನಾಸಾಮರ್ಥ್ಯವನ್ನು ಯಾವ ರೂಪವಾಗಿಯಾಗಲಿ ವೃದ್ಧಿಗೊಳಿಸಿಲ್ಲ. ಎಷ್ಟೆಷ್ಟು ಬಂಡವಾಳವು ಸಿಗಲು ಅವಕಾಶವಿದ್ದಿತೋ ಅಷ್ಟು ಈ ಪ್ರಯತ್ನದಲ್ಲಿಯೇ-ದೇಶದ ಆರ್ಥಿಕ ಆವಶ್ಯಕತೆಯೇನೂ ಇಂತಹ ವಿಸ್ತಾರ ಅಭಿವೃದ್ಧಿಕಾರ್ಯವನ್ನು ಪ್ರಾರ್ಥಿಸ ದಿದ್ದರೂ—ಸಹಾಯಮಾಡುವುದಕ್ಕಾಗಿ ಮೀಸಲಿಡಲ್ಪಟ್ಟಿತು.

ಬಡವರ ಪರಿಸ್ಥಿತಿಯನ್ನು ಗುಣಪಡಿಸುವುದರಲ್ಲಿ ಏನೂ ನೆರವಾಗದ ರೈಲ್ವೆಯ ವೆಚ್ಚದ ಕುಗ್ಗುವಿಕೆಯ ಜತೆಗೆ, ಕಳೆದುಳಿದ ಅತ್ಯಲ್ಪ ಅಂಶವನ್ನೂ ಸಾರ್ವಜನಿಕ ಸುಖಕ್ಕೆ ಏನೂ ಉಪಯುಕ್ತವಾಗದ ರೀತಿಯಲ್ಲಿಯೇ ಪ್ರತಿ ಫಲವಿಲ್ಲದ ವಿಧದಲ್ಲಿ ಮುಖ್ಯವಾದ ಖರ್ಚು ಬಾಬುಗಳನ್ನೂ ಏರ್ಪಡಿಸಿರು ವರು. ಶ್ರೀ. ಹೆಚ್. ಯಂ. ಹಿಂಡಮನ್ನನು ಇದನ್ನು ಹೀಗೆ ವಿವರಿಸಿರು ವನು: ' ಈ ವಿದೇಶೀಯ ಪ್ರಭುತ್ವವು[೧] ಅತೀವ ತುಟ್ಟಿಯಾಗಿದೆ; ಸಂಪೂರ್ಣ ವಾಗಿ ಅನಾವಶ್ಯಕವಾದ ದೆಹಲಿ ಮತ್ತು ಡಾಕಾಗಳ ನೂತನ ನಿರ್ಮಾಣದ ದುಂದುವೆಚ್ಚವು ಅನೇಕ ಮಿಲಿಯನ್ ಪೌಂಡುಗಳಷ್ಟು ಹಾನಿಯನ್ನು ಹೆಚ್ಚಿಸಿತು. ವಾಸ್ತವವಾಗಿ ಈ ವಿನಾಶಕಾರಕ ಪದ್ಧತಿಯನ್ನು ತೂಗಿಸಲು ಎಂದಿಗಿಂತಲೂ ಕ್ರೂರ ರೀತಿಯಲ್ಲಿ ಭೂಕಂದಾಯವು ವಸೂಲು ಮಾಡ ಲ್ಪಟ್ಟು, ರೈತನನ್ನು ಶಾಶ್ವತವಾಗಿ ದರಿದ್ರನನ್ನಾಗಿ ಮಾಡಿರುವುದು.'

ಒಂದುವೇಳೆ ಪ್ರಭುತ್ವದ ವೆಚ್ಚಗಳಿಗಾಗಿ ಸಮಸ್ಥಿತಿಯ ಹಂಚಿಕೆ ಏನಾದರೂ ಇದೆಯೆನೋ ಎಂದು ಆಲೋಚಿಸಿದಾಗ, ಹಿಂದೂದೇಶದ ಆರ್ಥಿಕ ಪದ್ಧತಿಯು ಇಲ್ಲಿಯೂ ಸಹ ತಪ್ಪುಮಾಡಿದೆಯೆಂಬುದನ್ನೂ ನಾವು ಕಾಣು ವೆವು. ಈ ಹಂಚಿಕೆಯ ಬಹು ಪ್ರಮಾಣವು ಇಂಗ್ಲೆಂಡಿನಲ್ಲಿಯೇ ಮಾಡ ಲ್ಪಟ್ಟು, ಅದೆಂದಿಗೂ ತೆರಿಗೆದಾರನಿಗೆ ಹಿಂದಿರುಗುವಂತೆಯೇ ಇಲ್ಲ. ಹಿಂದೂ ದೇಶದ ಹಸಿದು ಹಂಬಲಿಸುತ್ತಿರುವ ಪ್ರಜಾಕೋಟಿಯಿಂದುಂಟಾದ ಚಿಂತಾ

[೧] ಶ್ರೀ. ಹೆಚ್. ಯಂ. ಹಿಂಡಮನ್ನರ ' ಹಿಂದೂದೇಶದ ಪರಿಸ್ಥಿತಿ ' ಪುಟ. ೪೩

ಜನಕದ ಉಗೆಯು, ತಳಕೆಳಗಾಗಿ, ೫೦೦೦ ಮೈಲಿಯ ದೂರವಿರುವ ದ್ವೀಪದ ಶ್ರೀಮಂತ ಜನಾಂಗಕ್ಕೆ ಚೈತನ್ಯವನ್ನು ಕೊಡುತ್ತಿದೆ. ಪ್ರೊಫೆಸರ ಷಾರವರು ಅಂದಾಜು ಮಾಡಿರುವಂತೆ [೧] ಒಟ್ಟಿಗೆ ವಸೂಲು ಮಾಡಿರುವ ೪೦೦ ಕೋಟಿ ರೂಪಾಯಿಗಳಲ್ಲಿ, ಸುಮಾರು ೨೦೦ ಕೋಟಿ ರೂಪಾಯಿಗಳು ಹಿಂದೂದೇಶದ ಪ್ರಜೆಗಳಿಗೆ ನಿಜವಾದ ಯಾವ ಪ್ರತಿಫಲವನ್ನೂ ಎಂದಿಗೂ ಕೊಡುತ್ತಿಲ್ಲ. ಇಂಡಿಯಾಸರಕಾರವು, ಹಿಂದೂದೇಶದ ಸ್ಟೇಟ್‌ಸೆಕ್ರೆಟರಿಯವರು ವೆಚ್ಚಮಾಡುತ್ತಿರುವ 'ಗೃಹವೆಚ್ಚ'ವನ್ನೂ ಸಹ ತನ್ನ ಕೈಯಲ್ಲಿ ಇಟ್ಟುಕೊಂಡಿಲ್ಲ.

## ಕಾಗದದ ನಾಣ್ಯವೂ (ಕರನ್ಸಿ ನೋಟೂ), ಅದರ ಚಲಾವಣೆಯೂ

ತನ್ನ ಕಾಗದದ ನಾಣ್ಯವನ್ನು ಚಲಾವಣೆಯಲ್ಲಿ ತರುವ ನೀತಿಯಲ್ಲಿಯೂ ಸರಕಾರವು ತನ್ನ ಪ್ರಜೆಗಳ ಸೌಖ್ಯಕ್ಕೆ ಭಂಗ ತರುವಂತಹ ಬೆಳ್ಳಿಯ ನಾಣ್ಯ (ರೂಪಾಯಿ) ದ ವಿಕ್ರಯ ಸಾಮರ್ಥ್ಯದ ಅಚಂಚಲತ್ವವನ್ನು ಸಹ ಗಮನಿಸಿಲ್ಲ. ಹಾಗಲ್ಲದೆ ಪರದೇಶದ ವ್ಯಾಪಾರದಲ್ಲಿ ತೊಡಗಿರುವವರ ಹಿತದೃಷ್ಟಿಗಾಗಿ ಚಿನ್ನದ ನಾಣ್ಯದ ಸವರಿನ್ನಿನ ಜತೆಯಲ್ಲಿಯೇ ಇದರ ಸ್ಥಿರತ್ವವನ್ನು ತೂಗಿಸಿಕೊಂಡು ಬರುತ್ತಾ ತಮ್ಮ ನೀತಿಯನ್ನು ಮುಂದುವರಿಸುತ್ತಿರುವರು ಈ ಗುರಿಯನ್ನೇ ಕಾಣಲು ಗೋಲ್ಡ ಎಕ್ಸ್ಚೇಂಜ್ ಸ್ಟ್ಯಾಂಡರ್ಡ ರಿಜರ್ವಿನ ಮೂಲಕ ಪರದೇಶದ ಚಲಾವಣೆಯನ್ನು ನಡೆಯಿಸುತ್ತ ೪೦ ಮಿಲಿಯನ್ನುಗಳಷ್ಟು ಈ ನಿಧಿಯನ್ನೂ, ೨೦ ಮಿಲಿಯನ್ನುಗಳಷ್ಟು ಕಾಗದದ ನಾಣ್ಯದ ನಿಧಿಯನ್ನೂ ಭಂಗಾರದ ರೂಪದಲ್ಲಿಯೂ ಲಂಡನ್ನಿನಲ್ಲಿರುವ ಆಧಾರ ಪುಸ್ತಕಗಳ ರೂಪದಲ್ಲಿಯೂ ಇಟ್ಟಿರುವರು. ಈ ಮೊತ್ತದಲ್ಲಿ ಆರುನೂರು ಕೋಟಿಯಷ್ಟು ಸಾಲ ಕೊಡಬಹುದಾದ ದ್ರವ್ಯವಿರುವುದು. ಆದರೆ ಅದನ್ನು ಲಂಡನ್ನಿನ ಲೇವಾದೇವೀಗಾರರು ಕೇಳಿದ ಕೂಡಲೆ ಕೊಡುವರಲ್ಲದೆ ಕೈಗಾರಿಕೆಯ ಅಭಿವೃದ್ಧಿಗಾಗಿ ಹಾತೊರೆಯುತ್ತಲಿರುವ ಹಿಂದೂದೇಶಕ್ಕೆ ಇಲ್ಲದಂತೆಯೇ ಮಾಡಿಡಲಾಗಿದೆ. ಕೈಗಾರಿಕೆಯ ಅಭಿವೃದ್ಧಿಗಾಗಿ ಅದರ

೧ ಶ್ರೀ. ಕೆ. ಟಿ. ಷಾರವರ 'ಹಿಂದೂದೇಶದ ಸಂಪತ್ತು ಮತ್ತು ಕಂದಾಯ ಕೊಡುವ ಸಾಮರ್ಥ್ಯ' ಪುಟ ೨೮೨.

ವಿಸ್ತರಣಕ್ಕಾಗಿ ಲೇವಾದೇವಿಯು ಅವಶ್ಯಕತೆಯಿದ್ದರೂ, ಹಿಂದೂದೇಶದ ಉಳಿತಾಯವಾದ ಹಣವೆಲ್ಲವನ್ನೂ ಈಗಿರುವಂತೆ ಲಂಡನ್ನಿನಲ್ಲಿರುವ ಭಾರತೀಯ ನಿಧಿಯಲ್ಲಿ ಕೂಡಿಡುತ್ತಿರುವುದರಿಂದ, ಹಿಂದೂದೇಶದ ಲೇವಾದೇವಿಯೇ ಅಡ್ಡಿಮಾಡಲ್ಪಟ್ಟು ದೇಶದ ಸಂಪದಭಿವೃದ್ಧಿಯೇ ಕಷ್ಟಕ್ಕೊಳಗಾಗಿದೆ. ಚೇಂಬರಲೇನ ಕಮೀಷನ್ನಿಗೆ ಅರ್ಪಿಸಿದ ವರದಿಯಲ್ಲಿ, ಸರ್ ಯಂ. ಡಿ. ಪಿ. ವೆಬ್ಬನು [೧] ಹೀಗೆ ಹೇಳಿರುವನು: ‘ ಲಂಡನ್ನಿನಲ್ಲಿ ಚಿನ್ನದ ಆಧಾರ ನಿಧಿಯ ಪೂರ್ಣ ಭಾಗವನ್ನು ಪಡೆದಿಟ್ಟುಕೊಂಡಿರುವ ಸಾಮ್ರಾಜ್ಯ ನೀತಿಯನ್ನು ಕುರಿತು, ಅಮದಿಗಾಗಿ ಚಿನ್ನವನ್ನು ಒದಗಿಸುವುದರಲ್ಲಿಯೂ, ಪ್ರಪಂಚದ ಬೇರೊಂದು ಭಾಗದ ಹಣಕಾಸಿನ ಕೇಂದ್ರದಲ್ಲಿ ಚಿನ್ನವನ್ನು ಒದಗಿಸುವುದರಲ್ಲಿಯೂ ಪ್ರಭುತ್ವವು ತೆಗೆದುಕೊಂಡಿರುವ ಹೊಣೆಗಾರಿಕೆಯಲ್ಲಿ ಪ್ರಭುತ್ವವು ತನ್ನ ಮಿತಿಯನ್ನೇ ಮೀರಿ ನಡೆದಿದೆಯೆಂದು ಧಾರಾಳವಾಗಿ ಹೇಳಬಹುದು. ಎಲ್ಲಿ ಲೇವಾದೇವಿಗಾರ ಸಮಾಜವೇ ಇದ್ದು ಅವರೆಲ್ಲರೂ ತಮಗೆ ತಾವೇ ವ್ಯಾಪಾರ ನಡೆಸುತ್ತಿರುವರೋ ಅಂತಹ ಕೇಂದ್ರದಲ್ಲಿಯೇ ಈ ಚಿನ್ನದ ನಿಧಿಯನ್ನು ಶೇಖರಿಸಿಟ್ಟಿರುವುದೆಂದರೆ, ಕೆಲಸಕ್ಕೆ ಬಾರದ ಅಶಕ್ತವಾದ ತನ್ನ ಚಿನ್ನದ ನಿಧಿಯನ್ನು ಇದರಿಂದ ಬಲಪಡಿಸಿಕೊಳ್ಳಬಹುದೆಂದು ತಿಳಿದಿದ್ದರೂ ಸಹ, ಈ ನೀತಿಯನ್ನು ಅವಲಂಬಿಸಿ ಸಂಪೂರ್ಣ ರಕ್ಷಣೆಯನ್ನು ಪಡೆಯಲು ಸರ್ವ ಹಕ್ಕು ಬಾಧ್ಯತೆಯನ್ನೂ ಪಡೆದಿರುವಂತಹ ಹಿಂದೂದೇಶವನ್ನು ಅಪಾಯಕ್ಕೂ ತೊಂದರೆಗೂ ಗುರಿಮಾಡುತ್ತಿದೆ. ’ ಪ್ರೊಫೆಸರ್ ವಾಡಿಯಾ ಜೋಷಿಯವರು ಹೀಗೆ ತಿಳಿಸಿರುವರು: [೨] ‘ ಪ್ರಭುತ್ವವು ಲೇವಾದೇವಿ ಮಾಡುವ ಒಬ್ಬ ಸಾಹುಕಾರನ ಸ್ಥಾನವನ್ನು ಪಡೆದಿದೆ. ಅದು ಯಾವ ಜವಾಬ್ದಾರಿಯೂ ಇಲ್ಲದ ಶಕ್ತಿಯನ್ನೂ ಪಡೆದು, ಏನೊಂದು ಆರ್ಥಿಕ ನೀತಿಯನ್ನೇ ಒಳಗೊಳ್ಳದ ದಾರಿಯಲ್ಲಿ ಈ ನಿಧಿಗಳನ್ನು ತಿರುಗ ಮುರುಗ ಮಾಡುತ್ತಲಿರುವುದು; ದೇಶದ ಕೈಗಾರಿಕೆಯು ಸಂಪತ್ತಿಗೂ

---

೧ ವಾಡಿಯಾ ಮತ್ತು ಜೋಷಿಯವರ ‘ ಹಿಂದೂದೇಶದಲ್ಲಿ ಹಣವೂ ಅದರ ವ್ಯಾಪಾರವೂ ’ ಪುಟ ೩೫೦.

೨ ,, ,, ಪುಟ ೨೫೦.

ವ್ಯಾಪಾರಕ್ಕೂ ಯಾವ ಉತ್ತೇಜನವನ್ನೂ ಕೊಡದ ವಿಧಾನದಲ್ಲಿಯೇ ಅದು ವಿನಿಯೋಗವಾಡುತ್ತಿರುವುದು.

ಈ ರೀತಿಯಲ್ಲಿ, ಅಪ್ರತಿಫಲವಾದ ದುಂದು ವ್ಯರ್ಥ ವೆಚ್ಚಗಳಿಂದ, ದೇಶದ ಜನರ ಸೌಖ್ಯವನ್ನು ನುುಂದುವರಿಸದ ನಾಣ್ಯ ಚಲಾವಣೆಯ ನೀತಿಯಿಂದ, ಪ್ರಭುತ್ವದ ವ್ಯಯವು ಜನರನ್ನು ಬಡವರನ್ನಾಗಿ ಮಾಡುವ ಪರಿಣಾಮವುಂಟಾಗುತ್ತಿದೆ. ತಲೆತಲಾಂತರಗಳಿಂದಲೂ ಇಂತಹ ಸ್ಥಿತಿಗಳೊದಗಿ ಬಂದಿವೆಯೆಂಬುದನ್ನು ನಾವು ಜ್ಞಾಪಕಕ್ಕೆ ತಂದುಕೊಂಡಾಗ, ಈಗಿನ ಹಿಂದೂದೇಶದ ಬಡತನದಿಂದ ನರಳುತ್ತಿರುವ ಪರಿಸ್ಥಿತಿಯನ್ನು ತಿಳಿದುಕೊಳ್ಳುವುದೇನು ಕಷ್ಟ?

---

## ೪. ರಾಜ್ಯಾದಾಯ

ದರಿದ್ರ ವ್ಯವಸಾಯಿಕ ಕ್ಷೇತ್ರವಾದ ಹಿಂದೂದೇಶದಲ್ಲಿ, ಆದಾಯದ ಬಹುಭಾಗವು ಸಾರ್ವಜನಿಕ ಪ್ರಜೆಗಳಿಂದಲೂ, ಅಪರೋಕ್ಷವಾದ ತೆರಿಗೆಗಳಿಂದಲೂ ವಸೂಲಾಗುತ್ತಿದೆ. ಆದುದರಿಂದ, ಆ ಬಡ ಜನಾಂಗಕ್ಕೆ ಅತ್ಯಾವಶ್ಯಕವಾಗಿ ಬೇಕಾದ ವಸ್ತುಗಳ ಮೇಲೆ ಅಕಾರಣವಾಗಿ ವಿಶೇಷ ತೆರಿಗೆಯನ್ನು ವಿಧಿಸದಿರುವ ಮಹತ್ತರ ಹೊಣೆಗಾರಿಕೆಯು ಪ್ರಭುತ್ವದ್ದಾಗಿದೆ; ಸಾಧ್ಯವಾದಷ್ಟರ ಮಟ್ಟಿಗೂ ಪ್ರತ್ಯಕ್ಷವಾದ ಪುರೋಭಿವೃದ್ಧಿದಾಯಕವಾದ ಸಮಪ್ರಮಾಣದ ತೆರಿಗೆ ವಿಧಿಸುವ ವಿಧಾನವನ್ನು ಏರ್ಪಡಿಸಿ, ನಮ್ಮನ್ನು ಹಿಂದಕ್ಕೆ ಎಳೆಯುವ ಪದ್ಧತಿಯ ರೀತಿನೀತಿಯನ್ನು ನಿಲ್ಲಿಸಿ, ದೇಶದಲ್ಲಿ ಶಾಂತಿಯನ್ನು ನೆಲೆಗೊಳಿಸಬೇಕಾಗಿದೆ. ಬಡವರಾದ ಸಾರ್ವಜನಿಕರಿಗೆ ಆವಶ್ಯಕವಾದ ವಸ್ತುಸಂತತಿಯ ಮೇಲೆ ಬಹಳ ಸುಲಭವಾಗಿರುವಂತೆಯೂ, ಚೆನ್ನಾಗಿರುವ ಶ್ರೀಮಂತರಿಗೆ ಮಾತ್ರ ಉಪಯುಕ್ತವಾದ ವಸ್ತುಗಳ ಮೇಲೆ ಹೆಚ್ಚಾಗಿ ಸುಂಕ-ಸಾರಿಗೆಗಳನ್ನು ವಿಧಿಸುವ ಕ್ರಮವನ್ನು ಚೆನ್ನಾಗಿ ಪರ್ಯಾಲೋಚಿಸಿ ಪಟ್ಟಿಯನ್ನು ನಿರ್ಧರಿಸಬೇಕಾಗಿದೆ. ಪ್ರಭುತ್ವವು ಪ್ರಜಾಸಮುದಾಯದ ಮೇಲೂ ಸರಕಾರದ ಈ ವೆಚ್ಚದ ಹೊರೆಯನ್ನು

ಹಂಚಿಹಾಕಬೇಕಾಗಿದ್ದರೂ, ಅದೇ ವಿಧಾನದಲ್ಲಿಯೇ ಬಡಪ್ರಜೆಗಳ ಮೇಲೆ ಬಹು ಭಾರವಾದ ಹೊರೆಯನ್ನು ಹೇರುವುದು ಅತ್ಯಂತ ಅವಿವೇಕಯುತವಾದುದು. ಜೀವನಕ್ಕೆ ಬೇಕಾಗುವ ಅತ್ಯಗತ್ಯ ಸಾಮಾನಿನ ಮೇಲೆ ಮುಗಿಬೀಳುವುದಕ್ಕಿಂತ ಮುಂಚೆ ಸಾಧ್ಯವಾಗಿರುವ ಎಲ್ಲಾ ಆಧಾರಗಳನ್ನೂ ಶೋಧಿಸಿ ನೋಡಬೇಕಾಗಿದೆ.

ಈ ತೆರಿಗೆಗಳನ್ನು ವಸೂಲು ಮಾಡುವ ವೆಚ್ಚವನ್ನು ಅಥವಾ ಅವುಗಳನ್ನು ಸಾಧಿಸುವ ನೀತಿಯನ್ನು ನಮ್ಮ ದೃಷ್ಟಿಪಥದೊಳಗೆ ತೆಗೆದುಕೊಳ್ಳಬೇಕು. ಇದರಲ್ಲಿಯೂ ವಿವಿಧ ವಿಶೇಷವು ಕಂಡುಬಂದರೂ ಆ ವಿಧಾನದಲ್ಲಿ ಇರುವ ಲೋಪಗಳನ್ನು ಸೂಚಿಸುತ್ತದೆ—ಆ ಲೋಪವು ಆಡಳಿತಕ್ರಮದಲ್ಲಿಯಾದರೂ ಇರಬಹುದು ಇಲ್ಲವೆ ಅದನ್ನು ನಡೆಯಿಸುವ ನೀತಿಯಲ್ಲಿಯಾದರೂ ಇರಬಹುದು.

ಬಡತನದ ಸಾಮಾನ್ಯ ಜೀವನವನ್ನು ತೊಂದರೆಗೀಡುಮಾಡುವ ಕೈಗಾರಿಕೆಯ ಅಥವಾ ವ್ಯಾಪಾರದ ರೀತಿಯ ಚಟುವಟಿಕೆಗಳಲ್ಲಿ, ದೇಶದ ಅಭಿವೃದ್ಧಿಯ ಅವಶ್ಯಕತೆಗಳನ್ನು ನೆನಪಿನಲ್ಲಿಟ್ಟುಕೊಂಡು, ಲಾಭ ನೀತಿಯನ್ನು ಬಿಟ್ಟು, ಕೂಲಿ ಕೊರತೆಗಳಲ್ಲಿ ಅಡಗಿರುವ ನೀತಿಯನ್ನೇ ಅನುಸರಿಸಬೇಕಾಗಿದೆ. ಸಾಮಾನ್ಯ ಪ್ರಜೆಗಳಿಂದ ಬೆಳೆಸಲ್ಪಟ್ಟ ಫಲದ ಉತ್ಪತ್ತಿ ಕ್ರಯವನ್ನು ಬಾಧಿಸುವ ವ್ಯವಸಾಯಿಕ, ನೀರಾವರಿ, ಮಾರ್ಗಾನುಕೂಲಗಳ ವಿಚಾರದಲ್ಲಿ ಈ ಕೂಲಿಕೊರತೆಗಳಲ್ಲಿ ಅಡಗಿರುವ ನೀತಿಯನ್ನು ತಪ್ಪದೆ ಅನುಸರಿಸಬೇಕಾಗಿದೆ.

ಅವಿದ್ಯಾವಂತ ದೇಶದಲ್ಲಿ ನೆಲಸಿರುವ ಮೌಢ್ಯವು, ಉತ್ಪನ್ನ, ಆದಾಯದ ಅರಿವೇ ಇಲ್ಲದೆ ಸುಂಕ ಸಾರಿಗೆಗಳನ್ನು ವಸೂಲುಮಾಡಿ, ಅನ್ಯಾಯ ರೀತಿಯಿಂದ ವಿನಿಯೋಗಿಸುವ ವಿಧಾನವನ್ನು ತಡೆಗಟ್ಟುವುದು ಪ್ರಭುತ್ವದ ಪ್ರಧಾನಕರ್ತವ್ಯವಾಗಿದೆಯೆಂಬುದನ್ನು ಹೊರಗೆಡಹುತ್ತಿದೆ.

ಆದಾಯವನ್ನು ವಿಧಾಯಕ ಮಾಡಿಕೊಳ್ಳುವಾಗ, ಪ್ರಜೆಗಳ ಶಕ್ತಿ ಸಾಮರ್ಥ್ಯಗಳನ್ನು ಬದಿಗಿಟ್ಟರೂ, ಕಡೆಗೆ ಕಂದಾಯ ಕೊಡುವವನ ಕಾಲ ಮತ್ತು ಕ್ರಮದ ಸೌಕರ್ಯಗಳನ್ನು, ಹಾಗೆ ಕೊಡುವ ಕಂದಾಯವು ಯಾವ ವಿಧದಲ್ಲಿ ಮುಂದಿನ ಸಂಪಾದನೆಗೆ ಸೌಲಭ್ಯವನ್ನೊದಗಿಸುತ್ತದೆಂಬುದನ್ನು ನಾವು ಪರ್ಯಾಲೋಚಿಸಬೇಕಾಗಿದೆ.

ಪ್ರಭುತ್ವವು ಎಡರು ತೊಡರುಗಳಿಲ್ಲದೆ ನಡೆಯಿಸಿಕೊಂಡು ಹೋಗಲು ಸಂತತಧಾರೆಯಾಗಿ ಕಂದಾಯದ ಪ್ರವಾಹವು ಬರುವಂತೆ ಅದರ ಕ್ರಮವನ್ನು ವ್ಯವಸ್ಥೆಗೊಳಿಸಬೇಕಲ್ಲದೆ, ಅದೇ ಕಾಲದಲ್ಲಿ ಕಂದಾಯ ಕೊಡುವವರಿಗೂ ಯಾವ ಬಾಧೆಯೂ ಬಾರದಂತೆ ರೂಪುಗೊಳಿಸಬೇಕು.

೧೯-೫-೨೬ರ ಸರಕಾರದ ಅಂಕಿ ಅಂಶಗಳ ಗೋಷ್ವಾರೆಯಿಂದ ಸಿದ್ಧಗೊಳಿಸಲ್ಪಟ್ಟ ಈ ಕೆಳಗಿನ ವಿವರಗಳು, ವಸೂಲಾತಿಯ ವೆಚ್ಚವನ್ನು ಕಳೆದು, ಆದಾಯ ದಲ್ಲಿ ಪ್ರತಿಯೊಂದು ಬಾಬಿಗೂ ಎಷ್ಟು ನಿವ್ವಳ ಉತ್ಪತ್ತಿಯು ಬರುತ್ತಿರುವುದೆಂಬುದನ್ನು ಸೂಚಿಸುವುದು. ಇದು ಕೇಂದ್ರ ಮತ್ತು ಪ್ರಾಂತಿಕ ಸರಕಾರಗಳೆಲ್ಲವುಗಳ ಆದಾಯವೂ ಆಗಿದೆ.

| | ಸಾಮಾನ್ಯ ಉತ್ಪತ್ತಿಯ ಮೇಲೆ ವಸೂಲ ಮಾಡುವ ವೆಚ್ಚ | ಕೇವಲ ಉತ್ಪತ್ತಿ |
|---|---|---|
| ಸುಂಕಗಳು | ೧.೭% | ರೂ. ೪೬,೯೬,೧೮,೦೧೭ |
| ಆದಾಯ ತೆರಿಗೆ | ೩.೬% | ೧೫,೫೩,೩೨,೧೩೪ |
| ಉಪ್ಪು | ೧೯.೭% | ೫,೦೭,೯೦,೬೧೯ |
| ಅಫೀಮು | ೫೦.೮% | ೨,೦೩,೫೨,೪೩೭ |
| ಭೂಕಂದಾಯ | ೧೧.೬% | ೩೧,೪೩ ೭೯,೩೦೪ |
| ಮಾದಕ ಪದಾರ್ಥಗಳು | | ೧೭,೨೯,೧೩,೬೪೧ |
| ಸ್ಟಾಂಪು | | ೧೩,೨೫,೫೨,೨೦೫ |
| ಅರಣ್ಯಸಂಪತ್ತು | | ೨,೬೦,೩೦,೦೨೯ |
| ರಿಜಿಸ್ಟ್ರೇಷನ್ | | ೭೫,೧೪,೬೭೯ |
| ಕಪ್ಪಕಾಣಿಕೆಗಳು | | ೮೪,೨೯,೪೮೨ |
| ಇತರ ತೆರಿಗೆಗಳು | | ೩೪,೭೫,೨೧೦ |

| | ಗಳಿಕೆ | ಬಳಿಕೆ | |
|---|---|---|---|
| ರೇಲ್ವೆಗಳು | ೩೪,೪೩,೪೦,೭೫೯ | ೨೮,೯೨,೧೭,೭೮೭ | ೫,೫೧,೨೨,೯೭೨ |
| ಸೀರಾವರಿ | ೩,೭೪,೯೪,೫೪೯ | ೧,೩೫,೯೦,೫೫೫ | ೨,೩೯,೦೪,೦೨೪ |

| | | | |
|---|---|---|---|
| ಅಂಚೆ, ತಂತಿ | ೮೬,೩೫,೨೨೦ | ೫೦,೬೯,೧೩೪ | ೩೫,೬೬,೦೮೫ |
| ಒಡ್ಡಿ | | | ೬,೫೬,೦೨,೯೩೯ |
| ನಾಣ್ಯ, ನೋಟು | ೪,೬೩,೮೯,೧೦೧ | ೭೦,೧೧,೪೧೩ | ೩,೯೩,೭೮,೬೮೮ |
| ವಿಶೇಷ | ೨,೧೮,೬೯,೨೦೨ | ೨೬,೩೪ ೭೧೯ | ೧,೯೨,೩೬,೪೮೩ |

ಒಟ್ಟು ಆದಾಯ ರೂ. ೧,೫೬,೮೮,೦೦,೯೬೮

## ಸುಂಕಗಳು

ಈಗ ಆಚರಣೆಯಲ್ಲಿರುವ ಏಂಗಡಿಕೆಯಿಂದ ಈ ಸುಂಕಗಳು ಯಾವ ಸಂದರ್ಭಗಳಲ್ಲಿ ಏರ್ಪಟ್ಟುವೆಂಬುದನ್ನು ಶೋಧಿಸುವುದೇ ಕಷ್ಟವಾಗಿದೆ. ಆದರೆ ಸುಂಕದಿಂದ ಬಂದ ಆದಾಯವನ್ನು ಜಾಗರೂಕತೆಯಿಂದ ವಿಮರ್ಶೆ ಮಾಡಿದಾಗ ಈ ಕೆಳಗಿನ ಅಂಶಗಳು ಹೊರಬೀಳುವವು.

| | ಲಕ್ಷ ರೂಪಾಯಿಗಳು |
|---|---|
| ರಫ್ತಿನಿಂದ ಬಂದ ಸುಂಕಗಳಿಂದ | ೫,೮೯ |
| ಪೆಟ್ರೋಲಿನ ಮೇಲಿನ ತೆರಿಗೆಗಳಿಂದ | ೭೭ |
| ಆಮದು ಪದಾರ್ಥಗಳ ಮೇಲಿನ ಸುಂಕಗಳಿಂದ: | |
| ಮೋಟಾರ ಕಾರು, ಬೈಸಿಕಲ್ಲು ಮು. | ೩,೩೨ |
| ಮಾದಕ ದ್ರವ್ಯಗಳಿಂದ | ೨,೨೪ |
| ಯಂತ್ರಾದಿಗಳಿಂದ | ೧,೨೪ |
| ಬಟ್ಟೆಗಳು, ಕಬ್ಬಿಣದ ಪದಾರ್ಥಗಳು, ಇತರ ವಸ್ತುಗಳಿಂದ | ೮,೨೯ |
| ಒಟ್ಟು | ೨,೨೦೫ |

ಸಾಮಾನ್ಯವಾಗಿ ಇದು ಶ್ರೀಮಂತರ ಮೇಲೆ ಬೀಳುವ ತೆರಿಗೆಯ ಭಾಗವಾಗಿರುವುದೆಂದು ಹೇಳಬಹುದು. ಸುಂಕಗಳಿಂದ ಬರುವ ೯೬,೯೬ ಲಕ್ಷ ರೂಪಾಯಿಗಳ ಕೇವಲ ಉತ್ಪನ್ನಕ್ಕೆ ೨೨,೦೫ ಲಕ್ಷ ರೂಪಾಯಿಗಳ ನೂರಕ್ಕೆ

೪ನೆಯ ಭಾಗವನ್ನು ಶ್ರೀಮಂತರ ಖರ್ಚುವೆಚ್ಚಕ್ಕಾಗಿ ಸೇರಿಸಿದಾಗ ನಮಗೆ ೪೭೬೪೪ಲಕ್ಷ ರೂಪಾಯಿಗಳಿರುತ್ತವೆ. ಈ ಮೊತ್ತದಿಂದ ಅವರ ಮೇಲೆ ಹೇರಲ್ಪಟ್ಟಿರುವ ಹೊರೆಯನ್ನು ಕಳೆದಾಗ (೪೭,೬೪—೨೨,೦೫) ೨೫,೬೯ ಲಕ್ಷ ರೂಪಾಯಿಗಳು ಬಡವರ ಮೇಲೆ ಹೇರಲ್ಪಟ್ಟ ಭಾರವೆಂಬುದನ್ನು ನಾವು ನೋಡುತ್ತೇವೆ. ಸರಕಾರದ ಅಂಕಿ ಅಂಶಗಳ ವರದಿಯು ಬೇರೆ ಬೇರೆ ಸಮಾಜದ ಸ್ಥಿತಿಗತಿಗಳಿಗನುಸಾರವಾಗಿ ಹಾಕಬೇಕಾದ ಸುಂಕದ ಕ್ರಮವನ್ನು ತಿಳಿಸಲು ಇನ್ನೂ ಅನೇಕ ವಿಚಾರಗಳನ್ನು ವಿವರಿಸಬೇಕಾಗಿದೆ. ಆದುದರಿಂದ ಪರಿಷ್ಕಾರವಾಗಿ ಯಾವುದೇ ಪ್ರಮಾಣದಿಂದ ಕೆಲವು ವರುಷಗಳಲ್ಲಿ ನಡೆದಿರುವುದನ್ನು ಹೋಲಿಸಿ ಹೇಳಬೇಕೆಂದರೂ ಬಹಳ ಕಷ್ಟವಾಗಿರುವುದು. ಹೇಗಾದರೇನು, ರೂಪಾಯಿಯ ವಿಕ್ರಯ ಪ್ರಮಾಣದಲ್ಲಿ ಯಾವ ವ್ಯತ್ಯಾಸವೂ ಇಲ್ಲದಿರುವಂತೆ ಇದ್ದಾಗ, ಎಲ್ಲಾ ಬಾಬುಗಳಲ್ಲಿ ಹೆಚ್ಚು ಹೆಚ್ಚಾಗುತ್ತಿರುವ ರೀತಿಯನ್ನೂ ನಾವು ನೋಡುವುದೇನು ಕಷ್ಟವಲ್ಲ.

ಹಿಂದೂದೇಶವು ರೈತಾಪಿ ದೇಶವೆಂಬುದನ್ನು ನಾವು ನೆನಪಿನಲ್ಲಿಟ್ಟುಕೊಂಡಾಗ, ಸುಂಕದಿಂದ ವಸೂಲಾಗುವ ಆದಾಯವು ಬಹಳ ಕಡಿಮೆಯೆಂದು ನಾವು ಕಾಣುವೆವು. ಈ ಆಶ್ರಯದಿಂದಲೇ ಒಟ್ಟಿನ ಆದಾಯದಲ್ಲಿ ಬಹುಭಾಗವು ಬರಬೇಕಾಗಿದೆ. ಹಿಂದೂದೇಶದ ಮೇಲೆ ಹೊರಿಸಲ್ಪಟ್ಟಿರುವ 'ಸ್ವೇಚ್ಛಾವ್ಯಾಪಾರ' ತತ್ವವು ಈ ಆದಾಯದ ಆಧಾರವನ್ನು ಹೆಚ್ಚಿಗೆ ತಡವಿಕೊಳ್ಳದೆ ಸುಮ್ಮನೆ ಸುಲಭವಾಗಿ ಬಿಡುವುದಕ್ಕೆ ಹೊಣೆಯಾಗಿರುವುದು. ಬ್ರಿಟನ್ನಿನ ವಾಣಿಜ್ಯ ಮಂಡಲಿಯು ವಿದೇಶದೊಡನೆ ತನ್ನ ವಸಹಾತುಗಳ ಸುಂಕಗಳನ್ನು ಹೋಲಿಸಿ ನೋಡುವುದಕ್ಕಾಗಿ ೧೯೦೪ರಲ್ಲಿ ಇಂಗ್ಲೇಯ ರಫ್ತು ವ್ಯಾಪಾರದ ಮೇಲೆ ಹಾಕಿದ ಸುಂಕದ ಒಂದು ಪಟ್ಟಿಯನ್ನು ಸಿದ್ಧಗೊಳಿಸಿರುವುದು. ಅದರಲ್ಲಿ ಈ ಕೆಳಗೆ ಕಂಡಂತಿರುವುದು.[೧]

| | | | |
|---|---|---|---|
| ರಶಿಯಾ | ೧೩೧ | ರುಮೇನಿಯಾ | ೧೪ |
| ಸ್ಪೇನ್ | ೭೬ | ಬೆಲ್ಜಿಯಂ | ೧೩ |
| ಸಂಯುಕ್ತ ಸಂಸ್ಥಾನ | ೭೩ | ನಾರ್ವೆ | ೧೨ |
| ಪೋರ್ಟುಗಾಲ್ | ೭೧ | ನ್ಯೂಜಿಲೆಂಡ್ | ೯ |

೧ ಶ್ರೀ ಸಿ. ಎನ್. ವಕೀಲರ 'ಆಧುನಿಕ ಭಾರತದಲ್ಲಿ ಆರ್ಥಿಕ ಅಭಿವೃದ್ಧಿ' ಪುಟ ೪೪೨

| | | | |
|---|---|---|---|
| ಆಸ್ಟ್ರಿಯಾ ಹಂಗೆರಿ | ೩೫ | ಜಪಾನ | ೯ |
| ಫ್ರಾನ್ಸ | ೩೪ | ಟರ್ಕಿ | ೮ |
| ಅರ್ಜಂಟೈನಾ | ೨೮ | ಸ್ವಿಟ್ಜರ್ಲೆಂಡ್ | ೭ |
| ಇಟಲಿ | ೨೭ | ಆಸ್ಟ್ರೇಲಿಯಾ | ೬ |
| ಜರ್ಮನಿ | ೨೫ | ದಕ್ಷಿಣ ಆಫ್ರಿಕಾ | ೬ |
| ಸ್ವೀಡನ್ | ೨೩ | ಚೀನಾ | ೫ |
| ಗ್ರೀಸ್ | ೧೯ | ಹಾಲಂಡ್ | ೨ |
| ಡೆನ್ಮಾರ್ಕ | ೧೮ | ಬ್ರಿಟಿಷ್ ಇಂಡಿಯಾ | ೩ |
| ಕಾನಡಾ | ೧೭ | | |

ಈ ಆಧಾರವನ್ನು ಎಷ್ಟು ಸ್ವಲ್ಪ ಮಟ್ಟಿಗೆ ಶೋಧಿಸಿರುವರೆಂಬುದನ್ನು ಮೇಲಿನ ಅಂಕಿ ಅಂಶಗಳು ತಿಳಿಸುತ್ತಿವೆ. ಹಿಂದೂದೇಶಕ್ಕೆ ಆಮದಾಗಿ ಬರುವ ಬಹು ಭಾಗವೆಲ್ಲವೂ ಇಂಗ್ಲೆಂಡಿನಿಂದಲೇ ಬರುತ್ತಿರುವುದರಿಂದ, ಇತರ ದೇಶಗಳೂ ಆಂಗ್ಲೇಯ ಸಾಮ್ರಾಜ್ಯದ ಇತರ ಭಾಗಗಳೂ ಹೆಚ್ಚಿನ ಸುಂಕವನ್ನು ವಿಧಿಸಿ, ನಮ್ಮ ಹಿಂದೂದೇಶಕ್ಕೆ ಮಾತ್ರ ಕಡಿಮೆ ಮಾಡಿರುವುದರಲ್ಲಿ ಅಡಗಿರುವ ನೀತಿಯು ಒಡೆದು ಕಾಣುವಂತಿದೆ. ಅಲ್ಲದೆ ರಫ್ತಾಗುವ ಪದಾರ್ಥಗಳ ಮೇಲೆ ವಿಧಿಸುವ ಸುಂಕದಲ್ಲಿಯೂ ಸಹ ಇಂಗ್ಲೆಂಡಿನಲ್ಲಿರುವ ಸಾಹುಕಾರರ ಸೌಕರ್ಯಗಳಿಗೇ ಪ್ರಭುತ್ವದ ಪ್ರಥಮ ಪರ್ಯಾಲೋಚನೆಯಿದೆ. ನಮ್ಮ ದೇಶದಿಂದ ಇಂಗ್ಲೆಂಡಿಗೆ ವಿಶೇಷವಾಗಿ ರಫ್ತಾಗುತ್ತಿರುವ ಗೋದಿಯ ಮೇಲೆ ಸುಂಕವನ್ನು ಹಾಕಿದರೆ ಹಿಂದೂದೇಶದಲ್ಲಿ ಅದನ್ನು ಕೊಳ್ಳುವವರಿಗೆ ಗೋದಿಯು ಸುಲಭ ಬೆಲೆಗೇ ಸಿಗುತ್ತದೆ. ಪ್ರೊಫೆಸರ ಮಾರ್ಷಲನು ಹೀಗೆ ಅಂದಿರುವನು: [೧] 'ಯಾವ ದೇಶವು ತನ್ನ ಕಚ್ಚಾಪದಾರ್ಥಗಳನ್ನು ಇತರ ದೇಶಗಳಿಗೆ ರಫ್ತುಮಾಡುತ್ತ, ಸಿದ್ಧ ವಸ್ತುಗಳನ್ನು ಇತರ ದೇಶಗಳಿಂದ ತರಿಸಿಕೊಳ್ಳುತ್ತಿರುವುದೋ, ಆ ದೇಶದಲ್ಲಿ ವಿಧಿಸಲ್ಪಟ್ಟ 'ರಕ್ಷಣಾಸುಂಕವು' ತನ್ನ ದೇಶದ ಜನರಿಗೆ ಅಲ್ಲಿಯ ವಸ್ತುಗಳನ್ನು ಕೊಳ್ಳಲು ಅವುಗಳ ಬೆಲೆಯನ್ನು ಏರಿಸುವುದಿಲ್ಲ.' ಸಾಮಾನ್ಯವಾಗಿ, ವ್ಯವಸಾಯದ ವಿಸ್ತೀರ್ಣದಲ್ಲಿ ಸ್ವಲ್ಪ

---

೧ ಶ್ರೀ ಅಲ್ಫ್ರೆಡ್ ಮಾರ್ಷಲರ 'ಕೈಗಾರಿಕೆ ಮತ್ತು ವಾಣಿಜ್ಯ' ಪುಟ ೭೬೨

ಕಡಿಮೆಯಾಗುವಂತೆ ಅದರ ಪರಿಣಾಮವುಂಟಾಗಬಹುದು. ಆದರೆ ಈ ದರಿದ್ರ ದೇಶೀಯರೆಲ್ಲರೂ ಅರಹೊಟ್ಟೆಗೆ ಮಾತ್ರ ತಿಂದು ಕಾಲಕಳೆಯುತ್ತಿರುವುದರಿಂದ, ಹೀಗೆ ರಕ್ಷಿಸಲ್ಪಡಲಾಗುವ ನಿರ್ಬಂಧವೂ, ಧಾರಣೆಯಲ್ಲಾಗುವ ಕಡಿಮೆಯೂ ನಮ್ಮ ದೇಶದ ಜನರಿಗೆ ತಿನ್ನುವುದಕ್ಕೆ ಹೊಟ್ಟೆತುಂಬ ಒದಗಿಸಿಕೊಡುವುದು; ಇಂತಹ ಸನ್ನಿವೇಶದಲ್ಲಿ ಸರಿಯಾದ ಅಂಕಿ ಆಧಾರಗಳಿಲ್ಲದೆ ಕಾಲಕ್ರಮೇಣ ಪ್ರಭುತ್ವವು ಲಾಭ ಹೊಂದುವುದೋ ನಷ್ಟಪಡುವುದೋ ಹೇಳಲಾಗುವುದಿಲ್ಲ; ಆದರೆ ಈಗ ಇರುವುದಕ್ಕಿಂತಲೂ ಹೆಚ್ಚಾಗಿ ನಮ್ಮ ಹಿಂದೂದೇಶದ ಜನರಿಗೆ ಬೇಕಾದಷ್ಟು ಹೇರಳವಾಗಿ ಆಹಾರ ಸಾಮಗ್ರಿಗಳು ಸಿಗುವುವೆಂಬುದು ಖಂಡಿತವಾದ ವಿಚಾರ. ದೇಶದಲ್ಲಿ ತಲೆದೋರುವ ಕ್ಷಾಮಗಳನ್ನು ನಿವಾರಿಸಲು ಇದೊಂದು ರಚನಾತ್ಮಕ ಮಾರ್ಗವಾಗಬಹುದು.

'ಸ್ವೇಚ್ಛಾ ವ್ಯಾಪಾರ' ತತ್ವದಿಂದುಂಟಾದ ಅಗ್ಗದ ಬೆಲೆಗಳ ಲಾಭವನ್ನು, ಆಮದಾದ ಬಟ್ಟೆಬರೆಗಳನ್ನು ಉಪಯೋಗಿಸುವ ಐರೋಪ್ಯ ಮತ್ತು ಭಾರತೀಯ ಶ್ರೀಮಂತ ಜನಾಂಗದವರು ಮಾತ್ರವೇ ಅನುಭವಿಸುತ್ತಿರುವರು. ಈ ಆದಾಯದ ಮಾರ್ಗವನ್ನು ಅಷ್ಟು ಸುಲಭವಾಗಿ ಸುಮ್ಮನೆ ಬಿಟ್ಟಿರುವುದರಿಂದ, ಪ್ರಭುತ್ವಕ್ಕೆ ಅಗತ್ಯವಾದ ಆದಾಯವನ್ನು ಪಡೆಯಲು ಬೇರೆ ಬೇರೆ ಮಾರ್ಗಗಳನ್ನು ಹುಡುಕಬೇಕಾಯಿತು. ಇದಕ್ಕಾಗಿ ಜಮೀನು, ಉಪ್ಪು ಇತ್ಯಾದಿಗಳ ಮೇಲೆಯೂ ತೆರಿಗೆಯು ವಿಧಿಸಲ್ಪಡಬೇಕಾಯಿತು. ಈ ತೆರಿಗೆಗಳು ಆಮದುಪದಾರ್ಥಗಳನ್ನು ಉಪಯೋಗಮಾಡುತ್ತ ಯಾವ ತೊಂದರೆಯೂ ಇಲ್ಲದೆ ಸುಖವಾಗಿರುವ ಶ್ರೀಮಂತರ ಮೇಲಲ್ಲದೆ, ಬಡತನವನ್ನು ಅನುಭವಿಸುತ್ತ ಆರ್ಥಿಕ ದುಸ್ಥಿತಿಯಲ್ಲಿರುವ ಸಮಾಜದ ಮೇಲೆಯೆ ಹೇರಲ್ಪಟ್ಟಿರುವುವು.

ಹೀಗೆ ಆಮದುಪದಾರ್ಥಗಳ ಮೇಲೆ ವಿಧಿಸುವ ಅಗ್ಗದ ಸುಂಕಗಳ ಜತೆಗೆ, ಮಾದಕ ಪದಾರ್ಥಗಳ ಮೇಲೆ ಸಮತೂಕದಿಂದ ಹಾಕಲ್ಪಟ್ಟ ಸುಂಕಗಳು, ಬರಿಯ ಆದಾಯದೃಷ್ಟಿಯಿಂದ ವಿಧಿಸಲ್ಪಟ್ಟುವಲ್ಲದೆ ಯಾವ ವಿಧವಾದ ರಾಷ್ಟ್ರರಕ್ಷಣಾಹಿತದಿಂದ ಏರ್ಪಟ್ಟಿಲ್ಲವೆಂದು ಈ ಸುಂಕಗಳ ಪಟ್ಟಿಯೇ ಸೂಚಿಸುತ್ತದೆ. ಬಹಳವಾಗಿ ಟೀಕೆಗೊಳಗಾದ ಹತ್ತಿಯ ಮೇಲೆ ಹಾಕಲ್ಪಟ್ಟ ಸುಂಕವು ೧೯೩೬ರಲ್ಲಿ ರದ್ದುಮಾಡಲ್ಪಟ್ಟಿದ್ದರೂ, ಹಿಂದೂದೇಶವು ಬಹಳ

ಸೌಲಭ್ಯಗಳನ್ನು ಪಡೆದಿದ್ದುದರಲ್ಲೊಂದಾದ ಆ ಕೈಗಾರಿಕೆಯು ಬಹಳ ಮಟ್ಟಿಗೆ ಅದು ರದ್ದಾಗುವುದರೊಳಗಾಗಿ ನಾಶವಾಗಿ ಹೋಗಿದ್ದಿತು. ಹಾಲೆಂಡರು ವಿವರಿಸಿರುವಂತೆ, 'ಇಂಗ್ಲೆಂಡಿನ[1] ಸಂಪದಭಿವೃದ್ಧಿಯೂ, ಅದಕ್ಕೆ ಸಾಧನವಾಗಿ ಹಿಂದೂದೇಶವನ್ನು ಪಯೋಗಿಸಿಕೊಳ್ಳುವುದೂ, ಇದೇ ಆಚರಣೆಯಲ್ಲಿ ಪ್ರಭುತ್ವದ ಪರ್ಯಾಲೋಚನೆಯಾಗಿದೆ. ಹಿಂದೂದೇಶದ ಹಿತ ರಕ್ಷಣೆಯ[2] ಗುರಿಯಲ್ಲದೆ ಬೇರೆ ಧ್ಯೇಯವನ್ನು ಹೊಂದಿರುವುದರಿಂದಲೂ, ಅಲ್ಲದೆ ಪ್ರಭುತ್ವದ ಆಡಳಿತ ಸೂತ್ರಗಳನ್ನು ವಹಿಸಿಕೊಂಡಿರುವ ಜನಾಂಗದ ಸುಖದ ಕಡೆಗೆ ಪ್ರಭುತ್ವದ ದೃಷ್ಟಿಯೆಲ್ಲ ತಿರುಗಿಸುವುದರಿಂದಲೂ, ಹಿತ ಸಂರಕ್ಷಣೆಗಾಗಿ ತಾನು ಯಾವ ದೇಶದ ವಶಕ್ಕೆ ಒಪ್ಪಿಸಲ್ಪಟ್ಟಿರುವುದೋ ಆ ದೇಶದ ಮೇಲೆ ಹಿಂದೂದೇಶದ ಸರಕಾರವು ರಾಜದ್ರೋಹದ ಆಪಾದನೆಯನ್ನು ಹೊರಿಸುವುದರಲ್ಲಿ ಯಾವ ಅನುಮಾನವೂ ಇಲ್ಲ' ಕ್ರೈಸ್ತಧರ್ಮದ ಉಪದೇಶಕರಾಗಿದ್ದರೂ ಕೂಡ ರೆವರೆಂಡ ಹಾಲೆಂಡರು, ಪಾಪ! ಎಂತಹ ಚೆಲುವಾದ ಭಾವಗಳನ್ನು ಪಡೆದಿರುವರು! ನಿಜವಾಗಿ ನಿತ್ಯಜೀವನದಲ್ಲಿರುವ ರಾಜಕೀಯ ಪ್ರಾಪಂಚಿಕ ವಿಚಾರಗಳನ್ನು ತನ್ನ ಅಂಕೆಯಲ್ಲಿಟ್ಟುಕೊಂಡಿರುವ ಸೌಖ್ಯಮಯ ಜೀವನದ ತತ್ವಗಳನ್ನು ಅವರು ಮನಗಾಣದಿರಬಹುದು!

ಹಿಂದೂದೇಶದ ಸರಕಾರದಿಂದ ಆಚರಿಸಲ್ಪಡುತ್ತಿರುವ ಈ ಸುಂಕವಿಧಿಸುವ ವಿಧಾನದ ಪರಿಣಾಮವೂ, ಇದರ ಜತೆಗೆ ಮೇಲೆ ತಿಳಿಸಿದ ಪಕ್ಷಪಾತದ ರೈಲ್ವೆಯ ದರಗಳೂ, ಹಿಂದೂದೇಶದವರನ್ನು ಇಂಗ್ಲೆಂಡಿಗೆ 'ಕಟ್ಟಿಗೆಯೊಡೆಯುವವನನ್ನಾಗಿಯೂ ನೀರು ಸೇದಿಹಾಕುವವನನ್ನಾಗಿಯೂ' ಆಗಿರುವಂತಹ ಪರಿಸ್ಥಿತಿಗೆ ತಂದಿಳಿಸಿವೆ. ಭರತಖಂಡದ ಆರ್ಥಿಕ ಚರಿತ್ರೆಯಲ್ಲಿ ಪ್ರೊ. ಮಾರ್ಷಲ್ಲರು ವಿವರಿಸಿರುವಂತೆ,[3] 'ಯಾವ ದೇಶವೇ ಆಗಲಿ ಎಷ್ಟೆಷ್ಟು ತನ್ನ ಕಚ್ಚಾಪದಾರ್ಥಗಳನ್ನು ಪರದೇಶಗಳಿಗೆ ಕಳುಹಿಸುತ್ತದೆಯೋ, ಅಷ್ಟಷ್ಟು ಕಡಿಮೆ ಲಾಭವನ್ನು ಪಡೆಯುವುದು.' ಎಷ್ಟು ಸ್ಪಷ್ಟವಾದ ನಿದರ್ಶನವನ್ನು

೧ ಡಬ್ಲ್ಯು. ಇ. ಯಸ್ ಹಾಲೆಂಡ, 'ಹಿಂದೂದೇಶದ ಜಾಗರೂಕತೆ' ಪುಟ ೧೫೬

೨. ,, ,, ಪುಟ. ೫೮

೧ ಆಲ್ಛೆಡ್ ಮಾರ್ಷಲ್ಲರ 'ಕೈಗಾರಿಕೆ ಮತ್ತು ವಾಣಿಜ್ಯ' ಪುಟ ೭೮೨

ನಾವು ನೋಡುತ್ತಿರುವೆವು! ತನ್ನ ಅದೃಷ್ಟವನ್ನು ಇಂತಹ ಆರ್ಥಿಕ ತತ್ವಗಳು ಆಳುತ್ತಿರುವಾಗ, ಹಿಂದೂದೇಶವು ದಾರಿದ್ರ್ಯವನ್ನೇ ಅನುಭವಿಸದೆ ಮತ್ತೇನನ್ನು ಅನುಭವಿಸುವುದು ? '

ಪ್ರೊಫೆಸರ್ ಮಾರ್ಷಲ್ಲರು[೧] 'ತನ್ನ ಅಂತರ್ರಾಷ್ಟ್ರೀಯ ವಾಣಿಜ್ಯ ತತ್ವಗಳಲ್ಲಿ ಗ್ರೇಟಬ್ರಿಟನ್ ತನ್ನ ಸ್ವಲಾಭವನ್ನು ಸಂಪೂರ್ಣವಾಗಿ ಸಂರಕ್ಷಿಸಿಕೊಳ್ಳುತ್ತಿರುವುದು; ಆದರೆ ಇಂಗ್ಲೆಂಡಿನ ಆಡಳಿತದಲ್ಲಿರುವ ವಸಹಾತುಗಳೂ, ಹಿಂದೂದೇಶವೂ ಭದ್ರವಾದ ಸ್ಥಿತಿಯಲ್ಲಿಲ್ಲ; ಆದುದರಿಂದಲೆ ತನ್ನದೇ ಎಂದು ಭಾವಿಸಲ್ಪಟ್ಟ ಪ್ರತಿಯೊಂದು ದೇಶದಲ್ಲಿಯೂ ತಾನು ಹೆಚ್ಚಿಗೆ ಶ್ರದ್ಧೆ ವಹಿಸಿ ಅವುಗಳ ಹಿತಚಿಂತನೆಯನ್ನು ನೋಡುವ ಭಾರವು ನೈತಿಕವಾಗಿ ಅದರ ಬಾಧ್ಯತೆಯಾಗಿದೆ ' ಎಂದು ವಿವರಿಸಿ, ಮತ್ತೆ ಟಿಪ್ಪಣಿಯಲ್ಲಿ ಅವರು, ' ಕೆಲವೊಂದು ಕೈಗಾರಿಕೆಗಳನ್ನು ಮಾತ್ರ ಅಭಿವೃದ್ಧಿಪಡಿಸಬೇಕೆಂಬ ಅಗತ್ಯ ಎಷ್ಟೇ ಕಂಡುಬಂದರೂ, ತನ್ನವೇ ಆದ ಕೆಲವು ಕೈಗಾರಿಕೆಗಳ ಮೇಲೆ ಪೈಪೋಟಿ ಮಾಡದಂತೆ ಮಾಡಲು, ಬ್ರಿಟನ್ನಿನೊಳಕ್ಕೆ ಆಮದಾಗುವ ವಸ್ತುಗಳ ಮೇಲೆ ಹಾಕುವ ರಕ್ಷಣೆಯ ಸುಂಕದ ವಿಧಾನವನ್ನು ತನಗೆ ಮಾತ್ರ ಎಂದಿಗೂ ಅನ್ವಯಿಸಿಕೊಳ್ಳುವುದಿಲ್ಲ ಬ್ರಿಟನ್ನಿನ ಮತ್ತು ಇತರ ಪಾಶ್ಚಿಮಾತ್ಯ ದೇಶಗಳಿಂದ ತನ್ನ ದೇಶಕ್ಕೆ ಆಮದಾಗುತ್ತಿರುವ ಪದಾರ್ಥಗಳೊಂದಿಗೆ ತಾನೂ ಸರಿತೂಗಲು ತಕ್ಕ ದಾರ್ಢ್ಯವಿಲ್ಲದಿರುವಾಗ, ಕೆಲವೊಂದು ಭಾರತೀಯ ವಸ್ತುಗಳ ರಕ್ಷಣೆಗಾಗಿಯಾಗಲಿ ಅದನ್ನು ಅಭಿವೃದ್ಧಿಗೊಳಿಸುವುದಕ್ಕಾಗಿಯಾಗಲಿ ತೆರಿಗೆಯನ್ನು ವಿಧಿಸುವ ತತ್ವವನ್ನು ಆಚರಣೆಯಲ್ಲಿ ತರದಾಗ ತನಗೆ ಮಾತ್ರ ಎಂದಿಗೂ ಅನ್ವಯಿಸಲಾಗದು ' ಎಂದು ಹೇಳಿರುವರು. ಇದು ಮಹತ್ವದ ತತ್ವ; ತನ್ನೊಡನೆ ಒಬ್ಬನು ಹೇಗೆ ನಡೆದುಕೊಳ್ಳಬೇಕೆಂದು ಆಶೆಪಡುವನೋ ಹಾಗೆಯೇ ತಾನೂ ಇತರರಲ್ಲಿ ನಡೆಯಬೇಕಾದುದು ಉತ್ತಮ ಧರ್ಮ ವೈಯಕ್ತಿಕ ಜೀವನದಲ್ಲಿಯೂ ಅದನ್ನು ಸಾಧಿಸುವುದು ಕಷ್ಟತರ; ಸಮಾಜಜೀವನದಲ್ಲಂತೂ ಅಸಾಧ್ಯವಾದುದು. ಹೀಗಿರುವಾಗ ಇಂದಿನ ನೀತಿಯೇ ಪರರನ್ನು ಸುಲಿದು ತಿನ್ನುವಾಗ, ಜಾತೀಯತೆಯೇ ಸ್ವದೇಶದ ಹಿತವೇ ಬೇಕಿಲ್ಲದ ಪ್ರಪಂಚದಲ್ಲಿರುವ ರಾಜಕೀಯರಂಗದಲ್ಲಿ ಈ

---

೧ ಅಲ್ಫ್ರೆಡ್ ಮಾರ್ಷಲ್ಲರ 'ಕೈಗಾರಿಕೆ ಮತ್ತು ವಾಣಿಜ್ಯ' ಪುಟ ೬೫೩

ಧರ್ಮವನ್ನು ಹೇಗೆ ಕಾಣಬಲ್ಲೆವು ? ಹೀಗಿದ್ದೂ ಇಂಡಿಯಾ ಪ್ರಭುತ್ವದ ಮಾರ್ಗ ದರ್ಶಕ ತತ್ವದಲ್ಲಿ ಅಡಕವಾಗಿರುವ ಧರ್ಮೋಪದೇಶವನ್ನು ನಂಬತಕ್ಕ ವಿದೇಶ ವಂತರ ಪಂಗಡವಿರುವದನ್ನು ಕಂಡಾಗ ಅತ್ಯಂತ ಆಶ್ಚರ್ಯವಾಗುವುದು. ಮಿಲ್ ಪಂಡಿತನು ಅನುಭವದ ಮಾತನ್ನು ಹೇಳುತ್ತಾ, ಯಾವ ಜನಾಂಗವು ಒಂದು ಪ್ರಭುತ್ವದ ಆಡಳಿತವನ್ನು ಕೈಕೊಂಡಿರುವುದೋ ಅಂಥ ಪ್ರಭುತ್ವವು ಆ ಜನಾಂಗದ್ದೇ ಆಗಿ ಪರಿಣಮಿಸುವುದು. ನಮ್ಮ ಹಿಂದೂ ದೇಶದಲ್ಲಿ ಮಾತ್ರ ಅದೇನೋ ಸತ್ಯಾಂಶವಾಗಿದೆ. ಆಂಗ್ಲೇಯರಿಂದ ನಡೆಸಲ್ಪಡುತ್ತಿರುವ ಪ್ರಭುತ್ವವು ಆಂಗ್ಲೇಯರಿಗಾಗಿಯೇ ಆಗಿರುವ ಪ್ರಭುತ್ವವಾಗಿದೆ. ಇದು ಹಾಲೆಂಡರ ಹೇಳಿಕೆಯಲ್ಲಿ ವಿಶದೀಕೃತವಾಗಿ ಎದ್ದು ಕಾಣುತ್ತಿರುವುದು. [೧] 'ಆಂಗ್ಲೇಯರ ವ್ಯಾಪಾರ ಮತ್ತು ಬಂಡವಾಳದ ಸಂಬಂಧದ ಅವಶ್ಯಕತೆಗಳಿಗಾಗಿ ಅನುಕೂಲವಾದ ನೀತಿಯು ಎಲ್ಲಿಯ ವರೆಗೆ ಸರ್ವಾಧಿಕಾರದಿಂದ ನಡೆಯುತ್ತದೆಯೋ ಅಲ್ಲಿಯ ವರೆಗೆ ಹಿಂದೂದೇಶೀಯರು ಪರಕೀಯರ ಕೈಯಲ್ಲಿ ತಮ್ಮ ದೇಶದ ಆರ್ಥಿಕ ಭವಿಷ್ಯದಲ್ಲಿ, ಅಗತ್ಯವಾದ ರಾಜಕೀಯ ವ್ಯಾಪಾರದಲ್ಲಿ ಎಂದೆಂದಿಗೂ ಸುರಕ್ಷಿತವಾಗಿರಲಾರರು. ಅದನ್ನು ಹಾಗೆ ಅವರ ಕೈಯಲ್ಲಿ ಬಿಡುವುದು ಸೌಖ್ಯದಾಯಕವಲ್ಲವೆಂದೂ ಅವರು ತಿಳಿದುಕೊಂಡಿರುವರು.' ಮತ್ತೆ ಕೆಲವು ವಿಷಯಗಳನ್ನುಚ್ಚರಿಸಿ ಆತನು ಹೀಗೆ ವಿವರಿಸಿರುವನು: [೨] 'ಪರಕೀಯ ಜನಾಂಗವೊಂದರ ಮೇಲೆ ತಾನು ರಾಜಕೀಯ ಸ್ಥಾನದಲ್ಲಿರುವ ವರೆಗೂ ಹಿಂದೂದೇಶದ ಆರ್ಥಿಕ ಅಭಿವೃದ್ಧಿ ವಿಧಾನವು ತನ್ನ ದೇಶದ ಪ್ರಜೆಗಳ ಆರೋಗ್ಯವನ್ನೂ, ಬುದ್ಧಿಯನ್ನೂ, ಶಕ್ತಿಯನ್ನೂ ದುರ್ಲಕ್ಷಿಸಲೇಬೇಕು.' ಮೊನ್ನೆ ಮೊನ್ನೆ ದಂಡಿಯ ಸಣಬಿನ ವ್ಯಾಪಾರಿಯೊಬ್ಬನು ಬಂಗಾಳದ ಗವರ್ನರೊಡನೆ ಹೇಳುತ್ತಾ, [೩] 'ಅದೇನೋ ಉತ್ಕೃಷ್ಟವಾದ ದೇಶ; ಆದರೆ ಅಯ್ಯೋ ಪಾಪ! ಆ ದೇಶದವರೇ ಅಲ್ಲಿರುವರು.' ಎಂದು ಅದೇ ಗ್ರಂಥಕರ್ತನೇ ಅಂದಿದ್ದಾನೆ. ಆಂಗ್ಲೇಯರೂ ಸಹ ಹೇಗೆ ಮಾನವತ್ವವುಳ್ಳವರಾಗಿರುವರು! ಸಮಾನಸ್ಕಂಧರಾದ ಜನಾಂಗಗಳಲ್ಲಿ ಸ್ವೇಚ್ಛಾವ್ಯಾಪಾರ

೧ ಡಬ್ಲ್ಯು. ಇ. ಎಸ್. ಹಾಲೆಂಡರ 'ಹಿಂದೂದೇಶದ ಜಾಗರೂಕತೆ' ಪುಟ ೧೬೨

೨ ಡಬ್ಲು. ಇ. ಎಸ್. ಹ್ಲೆಂಡರ 'ಭಾರತೀಯ ಜಾಗರೂಕತೆ' ಪುಟ ೧೬೬

೩ ,, ,, ,, ೧೬೧

ನೀತಿಯು ಒಳ್ಳೆಯದಾಗಿರಬಹುದು. ಅಸಮಾನ ಪ್ರಪಂಚದಲ್ಲಿ ಕೈಲಾಗದನ ಮೇಲೆ ಕೈಲಾಗದವನು ತನ್ನ ಸಾಮರ್ಥ್ಯವನ್ನು ತೋರಿಸುತ್ತಿರುವನೆಂಬುದು ಅದರಿಂದ ದೃಢಪಡುತ್ತದೆ. ಅದರಲ್ಲಿಯೂ ಕೈಲಾದವನ ಕೈಯಲ್ಲಿಯೇ ಅಲ್ಲಿಯ ಆರ್ಥಿಕ ರೀತಿನೀತಿಗಳೆಲ್ಲವೂ ಇದ್ದಾಗ, ಕೈಲಾಗದವನ ಪಾಡನ್ನು ಹೇಳತೀರದು. ಕೆಲವೊಂದು ಸಂದರ್ಭಗಳಲ್ಲಿ ಕೆಲವು ಪರಿಮಿತಿಗಳಿಂದ ರಕ್ಷಣೆಯು ವೃದ್ಧಿಹೊಂದುತ್ತಿರುವ ವೃತ್ತಿ ಕೈಗಾರಿಕೆಗಳಿಗೆ ದೇಶದಲ್ಲಿ ಪ್ರಜೆಗಳಿಗೆ ಉಪಯುಕ್ತತೆಯೂ ಸೌಲಭ್ಯವೂ ಇರುವಂತಿದ್ದರೆ ಸಹಾಯಕಾರಿಯಾಗಿರುವುದು.

ಇದೇ ರೀತಿಯಲ್ಲಿಯೇ, ತಮ್ಮ ಅದೃಷ್ಟಗಳನ್ನು ತಾವೇ ರೂಪಿಸಿಕೊಳ್ಳುತ್ತಿರುವ ಸಾಮ್ರಾಜ್ಯದ ಇತರ ದೇಶಗಳೊಡನೆ ಆಚರಣೆಯಲ್ಲಿಟ್ಟಿರುವ 'ಸಾಮ್ರಾಜ್ಯ ಶ್ರೇಷ್ಠತ್ವ' ನೀತಿಯೂ, ಏನೂ ಆರ್ಥಿಕ ಸ್ವಾತಂತ್ರ್ಯವಿಲ್ಲದೆ ಹಿಂದೂದೇಶವನ್ನು ಇಟ್ಟಿರುವ ನೀತಿಯೂ ವಿಮರ್ಶಿಸಲ್ಪಟ್ಟಾಗ, ಅದು ಗ್ರೇಟಬ್ರಿಟನ್ನಿನ ಶ್ರೇಷ್ಠತ್ವವನ್ನುಂಟುಮಾಡುತ್ತಿದೆ.

## ಆದಾಯ ತೆರಿಗೆಗಳು

ತೆರಿಗೆ ವಿಧಿಸುವ ವಿಧಾನಗಳಲ್ಲಿ, ಪ್ರಪಂಚದ ಎಲ್ಲ ಭಾಗಗಳಲ್ಲಿಯೂ ಆದಾಯ ತೆರಿಗೆಯ ಕ್ರಮವೇ ಸಮಾಧಾನಕರವಾದುದೆಂದು ಪ್ರೀತ್ಯಾದರಗಳನ್ನು ಪಡೆಯುತ್ತಿದೆ. ಇತರ ವಿಧದ ತೆರಿಗೆಗಳೆಲ್ಲವೂ ಹಿಂದೂದೇಶದ ಬಡವರ ಮೇಲೆ ಬಹಳ ಭಾರವಾಗಿರುವಾಗ, ಈ ತೆರಿಗೆಯಿಂದ ಬರಬೇಕಾದಷ್ಟು ಪ್ರತಿಫಲವು ದೊರೆಯುತ್ತಿಲ್ಲ. ಕೆಲವು ಆದಾಯಗಳ ಮೇಲೆ ಈ ತೆರಿಗೆಯೇ ವಿಧಿಸಲ್ಪಡದೆ ಪುಕ್ಕಟೆಯಾಗಿ ಬಿಡಲ್ಪಟ್ಟಿರುವವು. ಹಿಂದೂದೇಶದ ಸರಕಾರವು ಇಂಗ್ಲೆಂಡಿನಲ್ಲಿರುವ ತನ್ನ ಸಾಲದ ಮೇಲೆ ಬಡ್ಡಿಯನ್ನು ತೆರುತ್ತಿರುವುದು; ಆದರೆ ಆ ದೇಶವು ತನ್ನ ಕಾರ್ಯಕ್ಷೇತ್ರದಲ್ಲಿಲ್ಲದಿರುವುದರಿಂದ ಆ ಮೊತ್ತಗಳಿಂದ ಯಾವ ತೆರಿಗೆಯೂ ವಸೂಲ್ಮಾಡುತ್ತಿಲ್ಲ ಪರದೇಶದ ಸಾಲಗಾರರಿಗೆ ತೆರುವ ಬಡ್ಡಿಯಿಂದ ತೆರಿಗೆಯನ್ನು ಇತರ ದೇಶಗಳಂತೆ ತಾನೂ ವಸೂಲ ಮಾಡಲು ಹಿಂದೂದೇಶಕ್ಕೆ ಅನ್ವಯಿಸುವಂತೆ ಕಾನೂನನ್ನು ವ್ಯತ್ಯಾಸಮಾಡಬೇಕಾಗಿದೆ. ಶ್ರೀ. ಷಾ ಮತ್ತು ಕಾಂಭಟ್ಟರವರು, ಈ

ಮಾರ್ಪಾಟನ್ನು ಮಾಡಿದಾಗ ಹಿಂದೂದೇಶದ ಬೊಕ್ಕಸಕ್ಕೆ ವರುಷಕ್ಕೆ ಎರಡು ಕೋಟಿ ರೂಪಾಯಿ[೧] ಗಳ ಉತ್ಪನ್ನವು ಒರುವುದೆಂದು ಅಂದಾಜು ಮಾಡಿರುವರು.

ತೆರಿಗೆಯನ್ನು ಹೊತ್ತುಕೊಳ್ಳುವ ಹೊರೆಯಿಂದ ಪಾರಾಗಿರುವ ಮತ್ತೊಂದು ತೆರಿಗೆಯ ಆಧಾರವೆಂದರೆ, ಸುಮ್ಮನೆ ಜಮೀನು ಕಂದಾಯದ ಬಾಬಿನಲ್ಲಿ ಕೊಡುತ್ತಿರುವ ದೊಡ್ಡ ದೊಡ್ಡ ಜಮೀನುದಾರರ ಆದಾಯ. ಅದು 'ಸ್ವಸಾಯದ ಆದಾಯ' ವೆಂದು ಪರಿಗಣಿಸಲ್ಪಟ್ಟಿರುವುದರಿಂದ, ಇದೊಂದು ರೀತಿಯಲ್ಲಿ ಒಂದೇ ಪ್ರಮಾಣದ ತೆರಿಗೆಯಾಗಿ, ಅಭಿವೃದ್ಧಿ ಹೊಂದುತ್ತಿರುವ ಆದಾಯದ ಮೇಲೆ ವಿಧಿಸಲ್ಪಡುವ ತೆರಿಗೆಯಿಂದ ಪಾರಾಗಿದೆ. ಇಲ್ಲಿ ತೆರಿಗೆಯನ್ನು ಕೊಡತಕ್ಕ ಚೈತನ್ಯವನ್ನು ಹಿಡಿದು ನೋಡಬೇಕಾಗಿದೆ. ಯಾವ ಆದಾಯವೇ ಆಗಲಿ, ಜಮೀನಿನಿಂದ ಬಂದರೂ, ಕೈಗಾರಿಕೆಯಿಂದ ಬಂದರೂ, ಅದು ಕೊಡುವವನ ಜೀವನ ಮಟ್ಟದಲ್ಲಿ ಅಗತ್ಯಕ್ಕಿಂತ ಹೆಚ್ಚಾಗಿದ್ದಲ್ಲಿ, ಆದಾಯದ ಮೇಲೆ ಸಮ ಪ್ರಮಾಣದ ತೆರಿಗೆಗಳು ವಿಧಾಯಕವಾಗುವಂತೆ, ಸ್ಥಿತಿಗತಿಗಳಲ್ಲಿ ಸಮತ್ವವೇರ್ಪಡುವಂತೆ ವಿಧಿಸಲ್ಪಡಬೇಕು. ಅದೇ ಗ್ರಂಥಕರ್ತರೇ ಈ ಪದ್ಧತಿಯನ್ನು ಅವಲಂಬಿಸುವುದರಿಂದ ವರುಷವೊಂದಕ್ಕೆ ಹತ್ತು ಕೋಟಿ ರೂಪಾಯಿಗಳ[೧] ಆದಾಯವು ಒರುವುದೆಂದು ಅಂದಾಜುಮಾಡಿರುವರು.

ಸಾವಿನ ಮೇಲೆ ವಿಧಿಸುವ ಸುಂಕವನ್ನು ನಾವು 'ಪುರಾತನ ಸುಂಕ' ವೆಂದು ಪರಿಗಣಿಸಿದರೂ, ಅದರಲ್ಲಿಯೂ ಸಹ ಸಾಕಷ್ಟು ಆದಾಯವನ್ನು ಹಾಗೆಯೇ ಬಿಟ್ಟಿರುವುದು. ಹಿಂದೂದೇಶದಲ್ಲಿದ್ದು ಬೇಕಾದಷ್ಟು ಐಶ್ವರ್ಯವನ್ನು ಗಳಿಸಿ, ಇಂಗ್ಲೆಂಡಿಗೆ ಮರಳಿ ವಿಶ್ರಾಂತಿಗೆ ಹೊರಡುವ ವಿದೇಶೀಯ ವರ್ತಕರ ಒಂಡವಾಳವೆಲ್ಲವೂ ಸಂಪೂರ್ಣವಾಗಿ ಸುಂಕಕ್ಕೆ ಸಿಗದೆ ಹೋಗುತ್ತಿರುವುದು. ವಾಸ್ತವವಾಗಿ ಆಂಗ್ಲೇಯರೆಲ್ಲರೂ ಕೆಲವು ಕಾಲ ಕಳೆಯಲು ಮಾತ್ರ ಇಲ್ಲಿಗೆ ಬಂದವರು. ಅವರು ಯಾವ ಉದಾರ ಸರಕಾರದ ನೆರಳಿನಲ್ಲಿ ತಮ್ಮ ಐಶ್ವರ್ಯವನ್ನು ಗಳಿಸಿರುವರೋ ಅದಕ್ಕೆ ಸಲ್ಲಿಸಬೇಕಾದುದನ್ನು ಸಲ್ಲಿ

---

೧. ಕೆ. ಟಿ. ಷಾ ಮತ್ತು ಕಾಂಭಟ್ಟರವರ 'ಹಿಂದೂದೇಶದ ಸಂಪತ್ತು ಮತ್ತು ತೆರಿಗೆ ಹಾಕುವ ಶಕ್ತಿಯೂ' ಪುಟ ೨೭೭

ಸದೆ ತಪ್ಪಿ, ಆ ಹೊರೆಯನ್ನು ಬಹುಮಟ್ಟಿಗೆ ಆ ದೇಶದಲ್ಲಿ ಕಷ್ಟಪಡುವವರ ತಲೆಯ ಮೇಲೆ ಹೇರಿ ಹೋಗುತ್ತಿರುವುದರಿಂದ ಅದು ವಿಶೇಷವಾಗಿ ಭಯಂಕರ ಪರಿಸ್ಥಿತಿಯದಾಗಿದೆ. ಇಂಗ್ಲೆಂಡಿನ ಪ್ರಭುತ್ವದ ಜತೆಯಲ್ಲಿ ಪರ್ಯಾಲೋಚಿಸಿ, ಹಿಂದೂದೇಶಕ್ಕೆ ಸಲ್ಲಬೇಕಾಗಿರುವುದನ್ನು ಆ ಆಸ್ತಿಪಾಸ್ತಿಗಳಿಂದ ಬರಮಾಡಿಕೊಳ್ಳುವಂತೆ ಒಂದು ರಚನೆಯನ್ನು ತಯಾರಿಸಬೇಕಾಗಿದೆ. ಈಗ ಆ ಆಸ್ತಿಯು ಇಂಗ್ಲೆಂಡಿನಲ್ಲಿ ತೆರಿಗೆಯನ್ನು ತೆರುತ್ತಿದೆ; ಹಿಂದೂದೇಶಕ್ಕೆ ಬರಬೇಕಾದ ಆದಾಯವನ್ನು, ಅದರ ಫಲವನ್ನು ಆಂಗ್ಲೇಯ ತೆರಿಗೆ ಕೊಡುವ ಪ್ರಜೆಯು ಅನುಭವಿಸುತ್ತಿರುವನು.

## ಉಪ್ಪು

ಹಿಂದೂದೇಶದಂತಹ ದೇಶದಲ್ಲಿ ಉಪ್ಪಿನ ಮೇಲೆ ವಿಧಿಸಿರುವ ತೆರಿಗೆಯ ಅನ್ಯಾಯವನ್ನು ವಿಮರ್ಶೆಮಾಡುವ ಅಗತ್ಯವಿಲ್ಲ. ಈ ತೆರಿಗೆಯನ್ನು ಭಾರತೀಯ ಮುಖಂಡರೆಲ್ಲರೂ ಕಟುತರವಾಗಿ ಟೀಕಿಸಿರುವರು. ಆರ್ಥಿಕ, ಸಾಮಾಜಿಕ ರೀತಿಯಿಂದ ಅದು ದೇಶಕ್ಕೆ ವಿನಾಶವನ್ನುಂಟುಮಾಡುವ ಅಯೋಗ್ಯವಾದ ಕೆಡುಕಾಗಿದೆ. ಡಬ್ಲ್ಯು. ಯಸ್. ಬ್ಲಂಟರವರು ಅದಕ್ಕೆ ಈ ಕೆಳಗೆ ಕಾಣುವಂತೆ ಪ್ರಮಾಣವನ್ನಿತ್ತಿರುವರು: [೧] 'ಬರಿಯ ಉಪ್ಪಿನಲ್ಲಿ ತೃಪ್ತಿಪಡುವವರು ಬಹಳ ಬಡವರಾದವರು; ಆದರೆ ದುರದೃಷ್ಟವಶದಿಂದ ದಕ್ಷಿಣ ಹಿಂದುಸ್ಥಾನದಲ್ಲೆಲ್ಲ ಸಾಮಾನ್ಯವಾಗಿ ಎಲ್ಲರೂ ಕಡು ಬಡವರೇ. ಡೆಕ್ಕನ್ನಿನಲ್ಲಿ, ನೈಸರ್ಗಿಕವಾದ ಲವಣವು ಭೂಮಿಯಲ್ಲಿಯೇ ಸಿಗುವುದರಿಂದ ಅದರ ಅಗತ್ಯವು ಬಹಳ ಮನೋವ್ಯಥೆಯನ್ನುಂಟುಮಾಡುವದಾಗಿದೆ. ಅದು ಸಮೃದ್ಧಿಯಾಗಿ ಸಿಗುತ್ತಿದ್ದರೂ ಅದನ್ನು ನೋಡುತ್ತ ನೋಡುತ್ತ ಅದರಿಂದಲೇ ಪ್ರಜೆಗಳೆಲ್ಲರೂ ಹಸಿದು ಹಂಬಲಿಸಬೇಕಾಗಿದೆ. ನಾನು ನೋಡಿದ ಅನೇಕ ಹಳ್ಳಿಗಳಲ್ಲಿ, ಕಳ್ಳತನದಿಂದಲಾದರೂ ತಮ್ಮ ದನಗಳು ಉಪ್ಪು ಸಿಗುವ ಪ್ರದೇಶಗಳನ್ನು ನೆಕ್ಕಿಕೊಂಡು ಒರುವಂತೆ ರಾತ್ರಿಯ ಹೊತ್ತು ದನಗಳನ್ನು ಹೊರಗಟ್ಟುವಂತಹ ಪರಿಸ್ಥಿತಿಗೆ ತುಳಿಯಲ್ಪಟ್ಟಿರುವರೆಂದು ಒಬ್ಬ ರೈತನು ಹೇಳಿದನು; ಆದರೆ ಅವರು ಹಾಗೆ ಕಾನೂನಿಗೆ ಭಂಗವಾಗಿ ವರ್ತಿಸುವುದನ್ನು

---

೧ ಡಬ್ಲ್ಯು. ಯಸ್. ಬ್ಲಂಟರವರ 'ರಿಪನ್ನನ ಆಳಿಕೆಯಲ್ಲಿರುವ ಹಿಂದೂದೇಶ' ಪುಟ ೨೪೩

ಅಧಿಕಾರಿಗಳು ಕಂಡುಕೊಂಡರೆ ನಿರ್ಬಂಧದಲ್ಲಿಡುತ್ತಾರೆಂದೂ, ಈಗೀಗ ಭೂಮಿಯಲ್ಲಿ ಸಹಜವಾಗಿ ಸಿಗುವ ಉಪ್ಪನ್ನು ರಾಶಿರಾಶಿಗಳಾಗಿ ಕೂಡಿ ಹಾಕಿ ನಾಶಮಾಡಬೇಕೆಂದು ಪೋಲೀಸಿನವರಿಗೆ ಆಜ್ಞೆಯಾಗಿರುವುದು. ಇನ್ನೂ ಕೆಲವು ಭಾಗಗಳಲ್ಲಿ ಈ ಆಹಾರದ ಅತ್ಯಗತ್ಯ ಪದಾರ್ಥವನ್ನು ಇಲ್ಲ ದಂತೆ ಮಾಡಿರುವುದರಿಂದ ಜನರಲ್ಲೊಂದು ವಿಧವಾದ ಕುಷ್ಠರೋಗವು ತಲೆ ದೋರಿದೆಯೆಂದೂ ನಾನು ಕೇಳಿರುವೆನು. ಉಪ್ಪಿನ ಉತ್ಪತ್ತಿ ಕ್ರಿಯೆಕ್ಕಿಂತಲೂ ನೂರಕ್ಕೆ ೧೨೦೦ ರಿಂದ ೨೦೦೦ ದಷ್ಟು ಹೆಚ್ಚಿನ ಬೆಲೆಯನ್ನು ಹಾಕಿ ಪ್ರಭು ತ್ವವು ಪ್ರಜೆಗಳಿಗೆ ಉಪ್ಪನ್ನು ಮಾರುತ್ತಿದೆ ' ಸತ್ಯಪೂರ್ಣತೆಯ ತತ್ವದ ದೃಷ್ಟಿಯಿಂದ ಪರಿಶೀಲಿಸಿದಾಗಲೂ, ಅದರ ಸಾಮಾನ್ಯ ಫಲಕ್ಕಿಂತಲೂ ನೂರಕ್ಕೆ ೨೦ರಷ್ಟು ವಸೂಲಾತಿಯ ವೆಚ್ಚವಿರುವುದರಿಂದ, ಅದು ಇನ್ನೂ ಖಂಡನೀಯವಾಗಿದೆ. ರಾಂಸೆ ಮ್ಯಾಕಡೊನಾಲ್ಡರು ಇದನ್ನು ಕುರಿತು ಹೀಗೆ ಹೇಳಿರುವರು: ೧ ' ಉಪ್ಪಿನ ಮೇಲೆ ವಿಧಿಸಿರುವ ತೆರಿಗೆಯು ಬಲಾ ತ್ಕಾರವಾದುದೂ ದೌರ್ಜನ್ಯವಾದುದೂ ಆಗಿದೆ; ಅದನ್ನು ಜನರು ಅರ್ಥ ಮಾಡಿಕೊಂಡರೆ, ಅದು ಅಸಮಾಧಾನಕ್ಕೆ ದಾರಿಗೊಡುತ್ತದೆ. ಲಾಭ ಸಂಪಾ ದನೆ ಮಾಡುವ ವ್ಯಾಪಾರಮಂಡಲದಿಂದ ಹಿಂದೂದೇಶದಲ್ಲಿರುವ ಒಡತನದ ಲ್ಲಿಯೂ ತಮ್ಮ ಸ್ವಾರ್ಥತೆಯನ್ನು ಸಾಧಿಸುತ್ತಿರುವ ಸಾಮಾನ್ಯ ಸಾಹಸ ಕಾರ್ಯದಲ್ಲಿ ಕಳೆದುಳಿದುದಾಗಿದೆ. ' ಪ್ರಭುತ್ವದ ಜವಾಬ್ದಾರಿಯನ್ನು ಪ್ರಜೆ ಗಳೂ ತಿಳಿದುಕೊಳ್ಳಬೇಕಾದುದು ಅಗತ್ಯವೆಂಬುದನ್ನು ಈ ತೆರಿಗೆಯೇ ತಿಳಿಸು ವುದು. ಅಷಾಢಭೂತಿವಿದ್ಯೆಯೂ, ಮೌಢ್ಯವೂ, ಅಜ್ಞಾನವೂ ಪ್ರಜಾವರ್ಗ ದಲ್ಲಿ ಎಷ್ಟೇ ಹೆಚ್ಚಿದ್ದು ಅವರೇನೂ ತಿಳಿದುಕೊಳ್ಳಲಾರದೆಂದೂ, ಉಪ್ಪಿನ ಮೇಲೆ ಈ ಸುಂಕವು ಹಾಕಲ್ಪಟ್ಟಿರುವದೆಂಬುದನ್ನು ಅರ್ಥಮಾಡಿಕೊಳ್ಳಲಾರ ರೆಂದೂ, ಅಥವಾ ಒಂದುವೇಳೆ ಅವರು ತಿಳಿದುಕೊಂಡರೂ ಅದನ್ನು ಹೇಳಿ ಕೊಳ್ಳಲು ಅವರಿಗೆ ಬಾಯಿಯಿಲ್ಲವೆಂದೂ ಹೇಳಿದರೆ, ಇಂತಹ ಅಷಾಢ ಭೂತಿವಿದ್ಯೆಯು ಹಿಂದೂದೇಶದಲ್ಲಿ ನಡೆಯಲಾರದು. ಇಂತಹ ತರ್ಕವನ್ನು ಅವರು ಪ್ರಜಾಸತ್ತಾತ್ಮಕ ಪ್ರಭುತ್ವದಲ್ಲಿ ಪ್ರಜೆಗಳೇ ಪ್ರಭುತ್ವಾಡಳಿತಕ್ಕೆ ಜವಾಬ್ದಾರರಾಗಿರುವಾಗ ಉಪಯೋಗಿಸಬಹುದು. ಆದುದರಿಂದ, ಈ ತೆರಿಗೆ

---

೧ ರಾಂಸೆ ಮಾಕ್ಡೊನಾಲ ' ಹಿಂದೂದೇಶದ್ದ ರಾಜ್ಯಭಾರ ' ಪುಟ ೧೨೭

ಯನ್ನು ವಿಧಿಸಿರುವ ವಿಧಾನವು ರಾಜಕೀಯವಾಗಿಯೂ ಅನ್ಯಾಯವಾದು ದಾಗಿದೆ.

## ಭೂಕಂದಾಯ

ಈ ಆಶ್ರಯದಲ್ಲಿ ವಸೂಲಾಗುವ ವರಮಾನವು ತೆರಿಗೆಯೇ ಅಥವಾ ಬಾಡಿಗೆಯೇ ಎಂಬುದಾಗಿ ಬಹಳ ಚರ್ಚೆ ಹೊಂದಿರುವ, ಬಹಳ ತೊಂದರೆ ಪಡಿಸುತ್ತಿರುವ ಸಮಸ್ಯೆಯನ್ನು ಪರೀಕ್ಷಿಸುವುದು ನಮ್ಮ ಪ್ರಕೃತದ ಉಪನ್ಯಾಸದಲ್ಲಿ ಅಷ್ಟೇನೂ ಅವಕಾಶ ಪಡೆದಿಲ್ಲ. ಈ ಸಮಸ್ಯೆಯ ಆಗುಹೋಗುಗಳನ್ನೆಲ್ಲಾ ವಿಮರ್ಶಿಸುತ್ತಾ, ಬೇಡನ್ ಪವೆಲ್ಲನು ತನ್ನ 'ಬ್ರಿಟಿಷ್ ಹಿಂದುಸ್ಥಾನದಲ್ಲಿರುವ ಭೂವ್ಯವಸಾಯ ಪದ್ಧತಿ' ಯೆಂಬ ಸುಪ್ರಸಿದ್ಧ ಗ್ರಂಥದಲ್ಲಿ ಈ ರೀತಿ ವಿವರಿಸಿರುವನು: [೧] 'ಭೂಕಂದಾಯವನ್ನು ಬಾಡಿಗೆಯೆಂದು ಪರಿಗಣಿಸಲಾಗುವದಿಲ್ಲ. ವ್ಯವಸಾಯದ ಉತ್ಪನ್ನದ ಮೇಲೆ ವಿಧಿಸಲ್ಪಟ್ಟಿರುವ ತೆರಿಗೆಯೆಂದೇ ನಾನು ನಂಬಬೇಕಾಗಿದೆ.' ಅದು ಹೇಗಾದರೂ ಇರಲಿ, ಜಾನ್ ಆಗ್ನ್ಯು 'ಹಿಂದೂದೇಶದಲ್ಲಿ ಈಗಿರುವ ಭೂಕಂದಾಯ'ವೆಂಬ ತನ್ನ ಪುಸ್ತಕದಲ್ಲಿ ಹೇಳಿರುವಂತೆ, [೨] ನಮಗೆ ಬೇರೊಂದೇ ಒಂದು ಮಾರ್ಗವಿರುವುದು. ರೈತನಿಂದ ಅವನ ಉಳಿತಾಯದ ಲಾಭವನ್ನೆಲ್ಲಾ ತೆಗೆದುಕೊಳ್ಳುವ ಹಕ್ಕಿನಲ್ಲಿ ಅಡಗಿರುವ ತತ್ವದ ನ್ಯೋಸಗಾರಿಕೆಯನ್ನು ಮೊದಲು ನಾವು ಒಪ್ಪಿಕೊಳ್ಳಬೇಕಾಗಿದೆ. ಅಲ್ಲದೆ ಅದಕ್ಕೆ ವಿರೋಧವಾಗಿರುವ, ಅವನಲ್ಲಿ ಎಷ್ಟೆಷ್ಟು ಹೆಚ್ಚು ಉಳಿತಾಯವಾಗಿ ಸಂಗ್ರಹವಾಗುವದೋ, ಅಷ್ಟಷ್ಟು ಹೆಚ್ಚು ರಾಷ್ಟ್ರದ ಸಂಪತ್ತಿಗೆ ನೆರವಾಗಲು ಅದರ ಚೈತನ್ಯವು ವೃದ್ಧಿ ಹೊಂದುವುದಲ್ಲದೆ ರಾಜ್ಯಾದಾಯವನ್ನು ಬೆಳೆಸಲು ಸಹಾಯವಾಗುವುದೆಂಬ ತತ್ವವನ್ನು ಅಂಗೀಕರಿಸಬೇಕಾಗಿದೆ.' ರೈತನು ಕಂದಾಯವನ್ನು ಕೊಡುತ್ತಿರುವನು. ವ್ಯವಸಾಯವನ್ನು ಇನ್ನೂ ಮಾಡುತ್ತಲೇ ಇರುವನು; ಆದುದರಿಂದ ಅವನು ಕೊಡುವ ಕಂದಾಯವು ಅದೊಂದು ರೀತಿಯ ಬಾಡಿಗೆಯಾಗಿದೆಯೆಂದು ತರ್ಕಮಾಡುವುದು 'ಅರ್ಥಿಕ ಪುರುಷ'ನೊಬ್ಬನ ಕಾಲ್ಪನಿಕ ಸೃಷ್ಟಿ

---

೧ ಬೇಡನ್ ಪವೆಲ್‌ನ 'ಬ್ರಿಟಿಷ್ ಹಿಂದುಸ್ಥಾನದಲ್ಲಿರುವ ಭೂವ್ಯವಸಾಯಪದ್ಧತಿ' ಭಾಗ ೧ ಪುಟ ೨೪೦

೨ ಪ್ರೊಫೆಸರ್ ವಿ. ಜೆ. ಕಾಳೆಯವರ 'ಹಿಂದೂದೇಶದ ಆರ್ಥಿಕ ಚರಿತ್ರೆ' ಪುಟ ೮೦೭

ಯನ್ನೇ ಅಂಗೀಕಾರಮಾಡಿಕೊಂಡಂತಾಗುವುದು. ಈ ತರ್ಕವನ್ನು ಮತ್ತೆ ಯಾವ ಹಾದಿಯೂ ಇಲ್ಲದೆ ರೈತನು ಹೊಟ್ಟೆಗಿಲ್ಲದೆ ಸಾಯುತ್ತಿರುವಾಗ ಸಮರ್ಥಿಸಲಾಗುವದಿಲ್ಲ. ಇನ್ನೂ ಅನೇಕ ಮಾರ್ಗಗಳಿದ್ದು, ಕಂದಾಯ ಕೊಡಲು ಅವನ್ನು ತಾನು ಉಪಯೋಗಿಸಿಕೊಳ್ಳುತ್ತ ವ್ಯವಸಾಯಮಾಡು ತ್ತಿದ್ದರೆ, ಆಗೇನಾದರೂ ಈ ವಾದಕ್ಕೆ ಸ್ವಲ್ಪ ಬೆಲೆ ಬರುವಂತಾದೀತು. ಅಲ್ಲದೆ ಅದು ಇತರರ ಇಚ್ಛೆಯಿಂದಲೇ ನಡೆಯಬೇಕಾದಾಗ ಎಂದಿಗೂ ಸರಿ ಹೋಗಲಾರದು. ಹಿಂದೂದೇಶದ ಪ್ರಜೆಗಳನ್ನು ಬಲ್ಲವರು ಅಲ್ಲಿನ ಪ್ರಜೆಗಳಲ್ಲಿ ಯಾವ ವಿಧವಾದ ಜೀವಾಳವೂ, ಚಟುವಟಿಕೆಯೂ ಇಲ್ಲವೆಂದು ತಿಳಿದಿರು ವರು. ರೈತನು ತನ್ನ ವಸತಿಸ್ಥಾನಕ್ಕೆ ಅಂಟಿಕೊಂಡಿರುವನು. ಯಾವ ವಿಧದ ತೆರಿಗೆಯ ಕ್ರಮವೇ ಆದರೂ ಅದು ಅವನನ್ನು ಅವನ ಸ್ಥಳದಿಂದ ದೂರ ತಳ್ಳ ಲಾರದು. ಅವನು ಈ ವೃತ್ತಿಯನ್ನು ಬಿಟ್ಟು ಮತ್ತೊಂದರಲ್ಲಿ ಕಾಲಿಡಲು ಬೇಕಾದ ವೃತ್ತಿಕ್ಷೇತ್ರವೂ ಇಲ್ಲ. ಆದುದರಿಂದ ಅವನು ವಿಧಿಯಿಲ್ಲದೆ ಒಂದು ಹೊತ್ತು ಊಟವನ್ನಾದರೂ ಮಾಡಿ, ಹೊಟ್ಟೆ ಕಟ್ಟಿಕೊಂಡು ತೆರಿಗೆ ತೆರುತ್ತ ಇರಬೇಕಾಗಿದೆ. 'ಹಿಂದೂದೇಶದ ಪ್ರಭುತ್ವವು ಕಂದಾಯವನ್ನು ಭೂಮಿಯ ಮೇಲೆ ಕಟ್ಟಿದ್ದರೂ, ಅನೀತಿಯಿಂದ ನಿರ್ದಿಷ್ಟ ಮಾಡಿದ ರೂಢಿಯಿಂದ ವಿಧಿ ಸುತ್ತಿದೆ' ಎಂದು ಯುಸುಫ ಅಲ್ಲಿಯು ವಿವರಿಸಿರುವುದು ಸರಿಯಾಗಿಯೇ ಇದೆ. ೧

ಕಂದಾಯವನ್ನು ವಿಧಿಸಿರುವ ವಿವರವೂ, ವಿಧಾನವೂ ದೇಶದ ಬೇರೆ ಬೇರೆ ಪ್ರಾಂತ್ಯಗಳಲ್ಲಿ ಬೇರೆ ಬೇರೆ ವಿಧವಾಗಿದೆ. ಆದರೆ ಒಂದೇ ಪದ್ಧತಿಯಂತೆ ರೈತನು ತೆರುವ ತೆರಿಗೆಯು ವರುಷಕ್ಕೊಮ್ಮೆ ಹಣದ ರೂಪವಾಗಿಯೇ ಸಲ್ಲ ಬೇಕು. ಅದು ಸುಮಾರು ಮೂವತ್ತು ವರುಷದಷ್ಟು ದೀರ್ಘಕಾಲದಲ್ಲಿ ಬರಬಹುದಾದ ಬೆಳೆಯ ಮೇಲೆ ಅಂದಾಜು ಮಾಡಲಾಗಿದೆ. ವಾಸ್ತವವಾಗಿ ವರುಷವರುಷವೂ ಬರುವ ಬೆಳೆಗೂ ಇದಕ್ಕೂ ಯಾವ ಸಂಬಂಧವೂ ಇಲ್ಲ; ಅಥವಾ ಆ ವರುಷದಲ್ಲಿ ಬೆಳೆಯನ್ನು ಮಾರಿದಾಗ ಬರುವ ಬೆಲೆಗೂ ಸಂಬಂಧ ವಿಲ್ಲ. ಆದಕಾರಣ ಬೆಳೆಗೇಡಾದ ಕೆಟ್ಟ ಕಾಲದಲ್ಲಿ ರೈತನು ಕಂದಾಯ ಕೊಡಲು ಸಾಹುಕಾರರಲ್ಲಿ ವಿಧಿಯಿಲ್ಲದೆ ಸಾಲಮಾಡಲು ಹೋಗಬೇಕಾ

೧ ಎ ಯುಸುಫ ಅಲ್ಲಿಯವರು 'ಭರತಖಂಡವನ್ನು ರೂಪುಗೊಳಿಸುವುದು' ಪುಟ ೨೩೮

ಗುವುದು. ಹಾಗೆ ಸಾಲ ಮಾಡಿ ಕಂದಾಯ ತೆರುವ ಹಣವೇ ವರುಷವರುಷವೂ ಸರಾಸರಿ ಜಮೀನಿನ ಮೇಲೆ ಹಾಕಲ್ಪಟ್ಟಿರುವ ಕಂದಾಯದಲ್ಲಿ ಸುಮಾರು ನೂರಕ್ಕೆ ೫೦ರಷ್ಟಿರುವುದು [೧] ಮೊಗಲರು ಹಾಕಿದ್ದ ಸಾಂಪ್ರದಾಯವನ್ನೇ ತಾವೂ ಅನುಸರಿಸುತ್ತಿರುವರೆಂದು ಆಂಗ್ಲೇಯರು ಹೇಳಿದರೂ, ಈ ಹೆಚ್ಚಿನ ತೆರಿಗೆಗಳು, ದೇಶದಲ್ಲಿನ ಪರಿಸ್ಥಿತಿಯೇ ಅವ್ಯವಸ್ಥೆಯುಳ್ಳದ್ದಾಗ, ಇವು ಯುದ್ಧ ಸಹಾಯಕ್ಕಾಗಿಯೇ ಅಧಿಕವಾಗಿದ್ದುವೆಂಬುದನ್ನು ಅವರು ಮರೆತಿರುವರು. ತಾತ್ಕಾಲಿಕವಾಗಿ ವಿಧಾಯಕವಾಗಿದ್ದ ತೆರಿಗೆಯನ್ನೆ ಶಾಶ್ವತ ಕಂದಾಯವನ್ನಾಗಿ ಮಾಡುವುದು ಎಲ್ಲ ಅಭಿವೃದ್ಧಿಯನ್ನು ನಾಶ ಮಾಡಿದಂತೆಯೆ. ಮೊಗಲರು ಕಂದಾಯವನ್ನು ನಾಣ್ಯ ರೂಪವಾಗಿಯಾಗಲಿ ಇಲ್ಲವೆ ದವಸದ ರೂಪವಾಗಿಯಾಗಲಿ ಸಲ್ಲಿಸುವ ಸ್ವಾತಂತ್ರ್ಯವನ್ನು ಕೊಟ್ಟಿದ್ದರು. ಇದು ಅಗತ್ಯವಾದ ರಕ್ಷಣಾಕವಚವನ್ನು ಒದಗಿಸಿದ್ದಿತು; ಇದರ ಜೊತೆಗೆ ಪ್ರಭುತ್ವವು ಆನುವಂಶಿಕವಾಗಿ ಬಂದುದಾಗಿ ತೊಂದರೆಗೆ ಸಿಲುಕಿದಾಗ ತಗ್ಗಿ ನಡೆಯುತ್ತಿತ್ತು. ಹಾಗೆ ಪ್ರಜೆಗಳಿಗೆ ಅನುಕೂಲವಾಗಿ ನಡೆಯದಿದ್ದರೆ ಆ ಪ್ರಭುತ್ವವೇ ಕಿತ್ತೊಗೆಯಲ್ಪಡುತ್ತಿತ್ತು. ಹಾಗಲ್ಲದೆ ಆಂಗ್ಲೇಯ ಪ್ರಭುತ್ವವು ತನ್ನ ಪ್ರತಿನಿಧಿಗಳಿಂದ ಆಳಲ್ಪಟ್ಟು ಯಂತ್ರದಂತೆ ಹೃದಯವಾಗಲಿ ಜೀವವಾಗಲಿ ಇಲ್ಲದೆ ಕಠೋರವಾದ ರೀತಿಯಲ್ಲಿ ತನ್ನ ಅಧಿಕಾರವನ್ನು ನಿರ್ವಹಿಸುತ್ತಿದೆ ದವಸ ಧಾನ್ಯಗಳ ರೂಪವಾಗಿ ಕೊಟ್ಟ ಕಂದಾಯಕ್ಕೆ ಆಕಸ್ಮಿಕವಾಗಿ ಸರಿಯಾದ ಬೆಲೆ ಬರಲಾರದೆಂದು ಆಂಗ್ಲೇಯ ಪ್ರಭುತ್ವವು ಕಂದಾಯವು ನಾಣ್ಯಮೂಲಕವಾಗಿಯೇ ಸಲ್ಲಿಸಲ್ಪಡಬೇಕೆಂದು ನಿರ್ಬಂಧಿಸಿತು. ಇದಕ್ಕೆ ಬೇಕಾದಷ್ಟು ಹಣವನ್ನು ಗಳಿಸಲು ರೈತನು ನಷ್ಟವನ್ನನುಭವಿಸಬೇಕಾಯಿತು. ಹೇಗೆಂದರೆ—ಹೇರಳವಾಗಿ ದವಸ ಧಾನ್ಯಗಳಿಂದ ತುಂಬಿದ ದೇಶದಲ್ಲಿ ಅಗ್ಗವಾಗಿ ಸಾಮಗ್ರಿಗಳು ಮಾರುವುದರಿಂದ ಹಣಕ್ಕಾಗಿ ಸಾಲಮಾಡಬೇಕಾದ ಪ್ರಸಂಗವು ಬರುತ್ತಿದೆ. ಈ ವಿಧವಾಗಿ ಕಂದಾಯವನ್ನು ಕೊಡುವ ಪದ್ಧತಿಯು ರೈತನಿಗೆ ಬಹಳ ತೊಂದರೆದಾಯಕವಾಗಿದೆ. ಇವನ ರಕ್ತವನ್ನು

೧ ರಮೇಶಚಂದ್ರದತ್ತರ 'ವಿಕ್ಟೋರಿಯಾ ಕಾಲದ ಹಿಂದೂದೇಶ' ಪುಟ ೧೨

೨ ಡಾಕ್ಟರ ಬಾಲಕೃಷ್ಣರ 'ಹಿಂದುದೇಶದ ಅರ್ಥವಿಜ್ಞಾನ ಪತ್ರಿಕೆ'

ಅಕ್ಟೋಬರು ಸಂಚಿಕೆ ೧೯೨೭

ಹೀರುತ್ತಿರುವ ಸಾಹುಕಾರರಲ್ಲಿ ಸತತ ಸಾಲಗಾರನಾಗಿರಬೇಕಾಗುವುದು. ಜೀವನಕ್ಕಾಗಿ ಕನಿಷ್ಟಪಕ್ಷ ಬೇಕಾದುದಿಷ್ಟೆಂದು ಯಾವ ನಿಗದಿಯೂ ಏರ್ಪಟ್ಟಿಲ್ಲ. ಬಹುಶಃ ಯಾವಾಗಲೂ ಜೀವನದ ಅವಶ್ಯಕತೆಗಿಂತಲೂ ಕಡಿಮೆಯೇ ಇರುತ್ತಿದೆ. ರೈತನ ದಾರಿದ್ರ್ಯದ ಅಭಿವೃದ್ಧಿಗೆ ಇದು ಸಹಾಯಕಾರಿಯಾಗುತ್ತಿದೆ. ಈ ವಿಚಾರವನ್ನು ವಿಮರ್ಶಿಸುತ್ತ ರಾಂಸೆ ಮ್ಯಾಕ್ಡೊನಾಲ್ಡರು ಹೀಗೆ ಒಪ್ಪಿಕೊಂಡಿರುವರು:[೧] 'ಅಧಿಕವಾದ ಕಂದಾಯವೂ,ಅದನ್ನು ವಸೂಲಿಸುವ ಕಾಠಿಣ್ಯವೂ, ನಿಸ್ಸಂದೇಹವಾಗಿ ಪ್ರಜೆಗಳನ್ನು ದರಿದ್ರರನ್ನಾಗಿ ಮಾಡುತ್ತಿದೆ. ಶಾಸ್ತ್ರರೀತ್ಯಾ ನ್ಯಾಯವಾಗಿದ್ದು, ನಿಷ್ಪ್ರಯೋಜಕ ಆರ್ಥಿಕ ತತ್ವವನ್ನು ಪರಿಪಾಲಿಸುವ ಕಂದಾಯವನ್ನು ವಸೂಲಮಾಡುವ ವಿಧಾನವು ಆಚರಣೆಯಲ್ಲಿ ಅನ್ಯಾಯವಾಗಿಯೂ, ಕಟುತರ ಟೀಕೆಗೆ ಆಶ್ರಯವಾಗಿಯೂ ಇದೆ.'

ಹೀಗೆ ದೀರ್ಘಕಾಲದಿಂದಲೂ ಸಾಲಶೂಲಗಳ ಬಲೆಗೆ ಬಿದ್ದಿರುವ ರೈತನ ಪರಿಸ್ಥಿತಿಯನ್ನು ವಿಮರ್ಶಿಸುತ್ತ ಶ್ರೀ. ಬ್ಲಂಟರವರು ಹೀಗೆ ಹೇಳಿರುವರು:[೨] 'ಚನ್ನಾಗಿ ಪರಿಶೀಲಿಸಿದಲ್ಲಿ ರೈತರ ಈ ದಾರಿದ್ರ್ಯವೆಲ್ಲವೂ ಸಂಪೂರ್ಣವಾಗಿ ಜಮೀನು ಕಂದಾಯವನ್ನು ಕೊಡಲು ನಾಣ್ಯವನ್ನು ಸಂಗ್ರಹಿಸುವದಕ್ಕಾಗಿ ಒದಗಿದ ಪ್ರಸಂಗದಿಂದಲೇ ಪ್ರಾರಂಭವಾಗಿದೆಯೆಂದು ನಾನು ನಂಬುತ್ತೇನೆ. 'ಆಂಗ್ಲೇಯ ಪ್ರಭುತ್ವವು ಹಿಂದೂದೇಶದ ರೈತರ ಮೇಲೆ ಹೊರಿಸಿದ ಕೊನೆಯ ಪಾಪ ಕಾರ್ಯವಿದು.' ನಾವು ರೈತನಿಗೆ ಹಿಂಸಾತ್ಮಕ ಕಾರ್ಯಗಳಿಂದ ಸಾಯದ ಹಾಗೆ ರಕ್ಷಣೆಯನ್ನು ಕೊಟ್ಟಿದ್ದೇವೆ; ಆದರೆ ಬಹುಪಟ್ಟಿಗೆ ಅವನು ಹಸಿವಿನಿಂದ ಸಾಯುವದಕ್ಕೆ ಸಾಕಷ್ಟು ತೊಂದರೆಗಳನ್ನೂ, ಅಪಾಯ ಪರಿಸ್ಥಿತಿಗಳನ್ನೂ ಹೆಚ್ಚಿಸಿದ್ದೇವೆ.' ರೈತನನ್ನು ಸಾಹುಕಾರನ ಹಿಡಿತದಿಂದ ತಪ್ಪಿಸಲು ಪರಸ್ಪರ ಸಹಾಯಕ ಸಂಸ್ಥೆಗಳನ್ನು ಸ್ಥಾಪಿಸುವದರ ಮೂಲಕ ಕೆಲವೊಂದು ಪ್ರಯತ್ನಗಳು ನಡೆದಿವೆ; ಆದರೆ ರೈತನನ್ನೇ ಅಧೋಗತಿಗೆ ತುಳಿಯುತ್ತಿರುವ ಆ ಕಂದಾಯದ ಹೊರೆಯನ್ನು ತೆಗೆಯುವುದರಲ್ಲಿ ಈ ತೊಂದರೆಯ ನಿವಾರಣೋಪಾಯವಿದೆ. ಆಚಾರ್ಯ ರಾಧಾಕಮಲ ಮುಖರ್ಜಿಯು[೩] ಹೇಳಿರು

---

೧ ಜೆ. ರಾಂಸೆ ಮ್ಯಾಕ್ಡೊನಾಲ್ಡರ 'ಹಿಂದೂದೇಶದ ಆಡಳಿತ' ಪುಟ ೧೪೧

೨ ಡಬ್ಲ್ಯು. ಯಸ್. ಬ್ಲಂಟರವರ 'ರಿಪನ್ನನ ಆಳಿಕೆಯಲ್ಲಿ ಹಿಂದುಸ್ಥಾನ' ಪುಟ ೨೪೫-೬

೩ ರಾಧಾಕಮಲ ಮುಖರ್ಜಿಯವರ 'ಹಿಂದೂದೇಶದ ಗ್ರಾಮಾಂತರಗಳ ಆರ್ಥಿಕ ಸ್ಥಿತಿ' ಪುಟ ೨೦೪

ವಂತೆ 'ತಮಗೆ ಬೆಳೆದ ಅಂದಾಜು ಬೆಳೆಯಲ್ಲಿ ನೂರಕ್ಕೆ ನಲವತ್ತೈದರಷ್ಟು ಕಂದಾಯಕ್ಕಾಗಿ, ೨೫ ರಷ್ಟು ಬಡ್ಡಿಗಾಗಿ ಹೋಗುವುದರಿಂದಲೂ, ಮುಂದೆ ಬರುವ ಕಾಲವೈಪರೀತ್ಯಗಳಿಗೆ ತೊಂದರೆಯಿಲ್ಲದಂತೆ, ಎಷ್ಟೇ ಚೆನ್ನಾಗಿ ಬೆಳೆದಿದ್ದರೂ ತನ್ನ ಆ ಮೂರು ಎಕರೆಯಿಂದ, ನಾಣ್ಯ ರೂಪವಾಗಿ ಪ್ರತ್ಯಕ್ಷ ತೆರಿಗೆಯನ್ನು ಐದು ಮಂದಿಯೂ ಕೊಡಲಾರರು.'

## ಮಾದಕ ಪದಾರ್ಥಗಳು

ಪರದೇಶದಿಂದ ನಮ್ಮ ದೇಶಕ್ಕೆ ಆಮದಾದ ಮಾದಕ ದ್ರಾವಕಗಳೆಲ್ಲಕ್ಕೂ 'ಸುಂಕ'ಗಳು ಹಾಕಲ್ಪಟ್ಟಿರುವುದರಿಂದ, ಈ ತೆರಿಗೆಯು ಮುಖ್ಯವಾಗಿ ಸ್ವದೇಶೀಯ ಮಾದಕ ದ್ರವ್ಯಗಳಿಗೇ ಅನ್ವಯಿಸುತ್ತದೆ. ಹಿಂದೂ ದೇಶವು ಪುರಾತನ ಕಾಲದಿಂದಲೂ ಪಾನನಿರೋಧಕ ದೇಶವಾಗಿದೆ; ಆದರೆ ಈಗ ಪಾನ ಮಾಡುವುದು ದಿನೇ ದಿನೇ ವೃದ್ಧಿ ಹೊಂದುತ್ತಿದೆ; ಮಾನವತ್ವದ ಗುಣಗಳನ್ನು ಸಹ ಲಕ್ಷಿಸದೆ ತೆರಿಗೆಯನ್ನು ಪಡೆಯುವ ಆತುರದಲ್ಲಿ ಪ್ರಭುತ್ವವು ಅನುಸರಿಸುತ್ತಿರುವ ನೀತಿಯನ್ನು ನಾವು ಕೊಂಡಾಡಬೇಕಾಗಿದೆ. ಭಾರತೀಯ ಮುಖಂಡರಿಂದ ಬಹಳ ಕಾಲದಿಂದ ಕಟುತರವಾಗಿ ಈ ರೀತಿ ನೀತಿಯು ಟೀಕಿಸಲ್ಪಡುತ್ತಿದ್ದರೂ, ಸಾಮಾಜಿಕ ಆಗತ್ಯಗಳಿಗಿಂತಲೂ ಆರ್ಥಿಕ ಆಗತ್ಯಗಳೇ ಅಧಿಕವಾಗಿವೆ. ಪಾನಮಾಡುವುದನ್ನು ತನ್ನ ಅಳತೆಯಲ್ಲಿಟ್ಟಿರುವುದೆಂದು ಪ್ರಭುತ್ವವು ಎಷ್ಟು ನಟನೆಮಾಡಿ ತೋರಿಸಿದರೂ, ದೇಶೀಯ ಮಾದಕ ದ್ರವ್ಯಗಳಲ್ಲಿ ಕಡಿಮೆಯಾದರೆ ವಿದೇಶೀಯ ದ್ರವ್ಯಗಳಲ್ಲಿ ಹೆಚ್ಚಾಗುವ ಲೋಪಗಳೆಲ್ಲವೂ ಕಂಡುಬರುವುವು. ೧೯೨೭–೨೮ರ ಬೊಂಬಾಯಿ ಪ್ರಾಂತಿಕ ಆಡಳಿತ ವರದಿಯಲ್ಲಿ[೧] 'ಇಷ್ಟೇ ಅಲ್ಲದೆ, ವಿದೇಶೀಯ ಮಾದಕ ದ್ರವ್ಯಗಳಾದ ಬೀರು, ಸ್ಕಾಟು ಇವುಗಳ ಬಳಸುವಿಕೆಯು ಬಹಳ ಹೆಚ್ಚುತ್ತಿದೆ; ದೊಡ್ಡದೊಡ್ಡ ಪಟ್ಟಣಗಳಲ್ಲಿ ಬಹುಮಟ್ಟಿಗೆ ಸ್ವದೇಶೀ ಮದ್ಯದ ಸ್ಥಾನವನ್ನು ವಿದೇಶೀಯ ಬೀರು ಆಕ್ರಮಿಸುತ್ತಿದೆಯೆಂದು ಹೇಳಲಾಗಿದೆ. ಆದರೆ ಬೊಂಬಾಯಿ ಸರಕಾರವು ಈ ವಿದೇಶೀಯ ಮದ್ಯದಿಂದ ಅಲ್ಪ ತೆರಿಗೆಯನ್ನು ಗಳಿಸುತ್ತಿದೆ' ಎಂದು ನಿರೂಪಣೆಯಿದೆ. (ಸುಂಕದ ರೂಪವಾಗಿ

---

೧. ಬೊಂಬಾಯಿ ಪ್ರಾಂತಿಕ ಆಡಳಿತದ ವರದಿ ಭಾಗ ೧, ಪುಟ XVIII.

ಬರುವ ಆದಾಯವೆಲ್ಲವೂ ಹಿಂದೂದೇಶದ ಕೇಂದ್ರ ಸರಕಾರಕ್ಕೆ ಸೇರಿದುದು.) ಈ ಪ್ರಭುತ್ವ ಪ್ರೋತ್ಸಾಹವನ್ನೂ, ಬೆಂಬಲವನ್ನೂ ಪಡೆದ ಮುತ್ತಿಗೆಯ ಸಾಧನ ದ್ರವ್ಯಗಳ ಉತ್ಪತ್ತಿಯಲ್ಲಿ ಕಡಿಮೆಯಾಗುವುದಕ್ಕೂ, ಬಲಹೀನರಾ ಗುವುದಕ್ಕೂ ಕಾರಣಗಳನ್ನು ಸುಲಭವಾಗಿ ತಿಳಿದುಕೊಳ್ಳಬಲ್ಲೆವಲ್ಲದೆ ಅದು ಯಾರ ತಪ್ಪಿನಿಂದ ನಡೆಯುತ್ತಿದೆಯೆಂಬುದನ್ನೂ ಗ್ರಹಿಸಬಲ್ಲೆವು.

## ಅರಣ್ಯಸಂಪತ್ತು

ಅರಣ್ಯಸಂಪತ್ತಿನ ವಿಚಾರವಾಗಿ ಏರ್ಪಟ್ಟಿರುವ ಪ್ರಭುತ್ವದ ರೀತಿ ನೀತಿಗಳು ಸಾಮಾನ್ಯವಾಗಿ ಅತ್ಯಂತ ಪ್ರಾಮಾಣಿಕತೆಯಿಂದ ನಿರೂಪಿಸಲ್ಪಟ್ಟು ಆಚರಣೆಯಲ್ಲಿಡಲ್ಪಟ್ಟಿವೆ. ಆದರೂ ಆ ಆಚರಣೆಯ ವಿಧಾನದಲ್ಲಿ ಬಡವರಲ್ಲಿ ಅದೇ ಕಠೋರ ಭಾವನೆಯೂ, ಅವರ ಅಗತ್ಯ ಅವಸರಗಳಲ್ಲಿ ನಿರ್ಲಕ್ಷ್ಯ ಭಾವ ನೆಯೂ ಇರುವುದನ್ನು ಕಾಣುವೆವು. 'ಆಡಳಿತ ವಿಧಾನವು ಪ್ರಜಾಸಾಮಾ ನ್ಯಕ್ಕೆ ಅನಗತ್ಯವಾಗಿ ಹಿಂಸಾತ್ಮಕವಾಗಿಯೂ, ಬಹಳ ತೊಂದರೆದಾಯಕವಾ ಗಿಯೂ ಇರುವುದು. ಯಾವ ವಿಚಾರದಲ್ಲಿ ಅದನ್ನು ಬಿಡಿಸಿ ನೋಡಿದರೂ ಪರಿಣಾಮವು ಮಾತ್ರ ವಿನಾಶಕಾರಿಯಾಗಿರುವುದು. ಹಿಂದೂದೇಶದಲ್ಲಿ ಮರ ಗಳ ಎಲೆಗಳನ್ನೂ ಗೊಬ್ಬರಕ್ಕೆ ಉಪಯೋಗ ಮಾಡುವರು; ಈಗ ಅದನ್ನು ಸುಮ್ಮನೆ ಕತ್ತರಿಸಿ ಹಾಕುತ್ತಿರುವರು. ಗೋಮಾಳವು ತೆಗೆಯಲ್ಪಟ್ಟು ದನ ಗಳು ಮೇವಿಲ್ಲದೆ ಹಸಿವಿನಿಂದ ಸಾಯುತ್ತಿರುವುವು. ಕಾಲಕಾಲಾಂತರ ಗಳಿಂದಲೂ ಅಡುಗೆ ಮುಂತಾದ ಮನೆ ಬಳಕೆಗೆ ಬೇಕಾದ ಸೌದೆಯನ್ನು ತರಲು ಪ್ರತಿಯೊಬ್ಬನಿಗೂ ಸ್ವಾತಂತ್ರ್ಯವಿದ್ದಿತು. ಆದರೆ ಈಗ ಪ್ರತಿಯೊಬ್ಬ ನಿಗೂ ಅಗತ್ಯವಾಗಿರುವ ಈ ಸೌದೆಯ ಹೊರೆಗೂ ಶುಲ್ಕ ತೆರಬೇಕಾಗಿದೆ' ಎಂದು ಬ್ಲಂಟರವರು ಹೇಳಿರುವರು:[೧] ಈ ಪ್ರತಿಬಂಧಕಗಳು ಎಷ್ಟೇ ಚಿಕ್ಕ ಪುಟ್ಟವಾದರೂ ಎಲ್ಲವೂ ಒಟ್ಟುಗೂಡಿ ಶಕ್ತಿಯುತವಾಗಿ ಮಾನವನ ಸಂಪಾ ದನೆಯ ಶಕ್ತಿಯನ್ನು ನಮ್ಮನ್ನೇ ಬೆರಗುಗೊಳಿಸುವ ಹಾಗೆ ಹಿಂದಹಿಂದಕ್ಕೆ ಒತ್ತುತ್ತಿವೆ.

---

೧ ಡಬ್ಲ್ಯು. ಎಸ್. ಬ್ಲಂಟರವರ 'ರಿಪನ್ನನ ಆಳಿಕೆಯಲ್ಲಿನ ಹಿಂದೂದೇಶ' ಪು. ೨೪೧-೨

## ರೈಲ್ವೆಗಳು

ಪ್ರಭುತ್ವದ ವೆಚ್ಚವನ್ನು ಕುರಿತು ವಿಮರ್ಶಿಸುವಾಗ, ದೇಶದಲ್ಲಿ ಕೈಗಾರಿಕೆಯ ಅಭಿವೃದ್ಧಿಯ ಮೇಲೆ ಆ ಪಕ್ಷಪಾತ ದೃಷ್ಟಿಯಿಂದ ದರಗಳು ಯಾವ ರೀತಿಯ ಪರಿಣಾಮವನ್ನುಂಟುಮಾಡಿರುವುವೆಂಬುದನ್ನು ತಿಳಿದು ಕೊಂಡೆವು. ಪ್ರಜಾಸಾಮಾನ್ಯದ ಸಂಪಾದನೆಯ ಮೇಲೆ ರೈಲ್ವೆಗಳ ಆಡಳಿತವು ಯಾವ ರೀತಿಯಿಂದ ಅವರ ಜೀವನ ರೀತಿಯನ್ನು ರೂಪುಗೊಳಿಸುತ್ತಿದೆಯೆಂ ಬುದನ್ನು ಇಲ್ಲಿ ನೋಡಬೇಕಾಗಿದೆ. ಮಾರ್ಗ ಸೌಕರ್ಯಗಳು, ಆರ್ಥಿಕ ಆವಶ್ಯಕತೆಗಳು ಸರಿಯಾಗಿ ಅಭಿವೃದ್ಧಿ ಹೊಂದುತ್ತಿದ್ದರೆ, ಬಡವರು ಮಾಡುವ ವ್ಯಾಪಾರವನ್ನು ರೈಲ್ವೆಗಳು ನಾಶಮಾಡುವುದಿಲ್ಲ. ವಾಸ್ತವವಾಗಿಯೂ ಅಮೆರಿಕೆಯಲ್ಲಿ ರೈಲುರಸ್ತೆಗಳನ್ನು ಮೋಟಾರು ಮಾರ್ಗಗಳೇ ಧಿಕ್ಕರಿಸು ತ್ತವೆ. ಆದರೆ ಹಿಂದೂದೇಶದಲ್ಲಿ ಈ ವಿಧವಾದ ಮಾರ್ಗ ಸೌಕರ್ಯಗಳನ್ನು ಏರ್ಪಡಿಸಿಕೊಳ್ಳಲು ಬೇಕಾದಷ್ಟು ವ್ಯಾಪಾರವಿಲ್ಲದ್ದರಿಂದ, ರೈಲ್ವೆಗಳು ಎತ್ತಿನ ಗಾಡಿಗಳಿಗೆ ಪ್ರತಿಸ್ಪರ್ಧಿಯಾಗಿವೆ. ಆದರೆ ಗಾಡಿಯವನಿಗೆ ಮಾತ್ರ ತನ್ನ ಕಾಲ ವನ್ನೂ ಸಾಮರ್ಥ್ಯವನ್ನೂ ಉಪಯೋಗಿಸಿಕೊಳ್ಳಲು ಬೇರಾವ ಮಾರ್ಗ ವನ್ನೂ ಒದಗಿಸಿಲ್ಲ. ಹಿಂದೂದೇಶದ ಆರ್ಥಿಕಜೀವನವು ದೇಶದ ನೈಸರ್ಗಿಕ ಸನ್ನಿವೇಶಗಳ ಮೇಲೆ ಅವಲಂಬಿಸಿರುದುದೆ ಒಂದು ವಿಶಿಷ್ಟ ರೀತಿಯದಾಗಿದೆ. ಹಿಂಗಾರು ಮುಂಗಾರು ಮಳೆಗಳಿಂದಲೆ ರೈತನು ತನ್ನ ಭೂಮಿಯಲ್ಲಿ ಕಾಲಕ್ಕೆ ತಕ್ಕಂತೆ ವ್ಯವಸಾಯ ಮಾಡುತ್ತಾನೆ. ಆಗ ತನ್ನ ಎತ್ತುಗಳನ್ನು ಉಳುಮೆಗೂ ಕಪಲಿಗೂ ಉಪಯೋಗ ಮಾಡಿಕೊಂಡು ಆ ಕಾಲವಾದ ಮೇಲೆ, ಗಾಡಿಗೆ ಎತ್ತುಗಳನ್ನು ಹೂಡಿ, ಬಾಡಿಗೆಗೆ ಹೊಡೆದು ಹೊಟ್ಟೆ ಹೊರೆದುಕೊಳ್ಳುತ್ತಾನೆ. ರೈಲ್ವೆಯು ಪ್ರಾರಂಭವಾದಾಗಿನಿಂದ, ಈ ಉಪ ವೃತ್ತಿಯು ಅವನ ಕೈಬಿಟ್ಟು ಹೋಗಿರುವುದು. ಆದುದರಿಂದ ಈಗ ವರ್ಷದ ಬಹಳ ಕಾಲದುದ್ದಕ್ಕೂ ಅವನೂ, ಅವನ ಎತ್ತುಗಳೂ ಏನೂ ಕೆಲಸವಿಲ್ಲದೆ ದುಡಿಮೆ ಮಾಡುವಂತಿಲ್ಲ. ರೈಲ್ವೆಗಳು ತಮಗೆ ತಾವೇ ದುಷ್ಪ್ರಯೋಜನಕಾರಿ ಯಾದುವೆಂದು ಇಲ್ಲಿ ವಾದಿಸಬೇಕಾಗಿಲ್ಲ. ಆದರೆ ಅವು ಬಂದುದರ ಪರಿಣಾಮ ವಾಗಿ ಮುಂಚೆಯಿದ್ದುದಕ್ಕೆ ಪ್ರತಿಯಾಗಿ ಮತ್ತಾವುದೂ ಕಂಡುಹಿಡಿಯಲ್ಪ ಟ್ಟಿಲ್ಲ. ಸಮಯ ಸನ್ನಿವೇಶಗಳು ವಿಧಿಯಿಲ್ಲದೆ ಹಾಗೊದಗಿ ಬಂದು ರೈತನು

ಕಾಲಹರಣ ಮಾಡಲಾರದ ಕಾಲವನ್ನು ವ್ಯರ್ಥವಾಗಿ ಸುಮ್ಮನೆ ಕಳೆಯ ಬೇಕಾಗಿದೆ. ಆದುದರಿಂದ ಉತ್ಪತ್ತಿಯು ಅತೀವ ಕಡಿಮೆಯಾಗಿ ರೈತನು ಒಡವನಾಗಿದ್ದಾನೆ.

ರೈಲ್ವೆಗಳೆಲ್ಲವೂ ಲಾಭದಾಯಕ ದೃಷ್ಟಿಯಿಂದಲೇ ಆಡಳಿತವನ್ನು ನಿರ್ವಹಿಸುತ್ತವೆ ನಿಸ್ಸಂದೇಹವಾಗಿ ಪ್ರಭುತ್ವಕ್ಕೆ ಹಣ ಬೇಕು; ಆದರೆ ಅದು ತನ್ನ ಆಡಳಿತದಲ್ಲಿರುವ ಅಧಿಕಾರಿಗಳಿಗೆ ಕೊಡುವ ಸಂಬಳವನ್ನೂ ಸಿಬ್ಬಂದಿಯನ್ನೂ ಮೊದಲು ಕಡಿಮೆ ಮಾಡಬೇಕಾಗಿದೆ. ಆಮೇಲೆ ಪ್ರಜೆಗಳ ಸಂಪಾದನೆಗೆ ವಿರೋಧ ಪರಿಣಾಮವನ್ನುಂಟುಮಾಡದಿರುವ ಸರಿಯಾದ ಆದಾಯದ ಮಾರ್ಗಗಳನ್ನು ಆರಿಸಬೇಕಾಗಿದೆ.

## ವ್ಯವಸಾಯ

ಹಿಂದೂದೇಶಕ್ಕೆ ಇದು ಅತೀವ ಮಹತ್ವದ ವ್ಯವಸಾಯವಾಗಿದೆ. ಇದನ್ನು ಬಿಟ್ಟರೆ ಗತಿಯಿಲ್ಲವೆನಬಹುದು. ಹಿಂದೂದೇಶದಲ್ಲೆಲ್ಲಾ ಹೇರಳವಾಗಿ ಫಲವತ್ತಾದ ಪ್ರದೇಶವಿದೆ. ಎಲ್ಲರಿಗೂ ಸಾಕಷ್ಟು ಉದ್ಯೋಗವಿದ್ದಾಗ್ಯೂ, ಪ್ರಕೃತಿಯನ್ನು ಸಿದ್ಧಗೊಳಿಸಿಕೊಳ್ಳದೆ, ಎಲ್ಲಿ ಬೇಕಾದಲ್ಲಿ ಯಾವಾಗ ಬೇಕಾದಾಗ ನೀರನ್ನು ಒದಗಿಸುವಂತೆ ಮಾಡಿಕೊಳ್ಳದೆ ಇದ್ದರೆ, ರೈತನು ಹಸಿವಿನ ತುತ್ತಿಗೆ ಬಲಿಯಾಗಿ ಸಾಯಬೇಕಾಗುತ್ತದೆ. ಮಳೆಗಳು ಸಕಾಲಕ್ಕೆ ಬಂದರೂ ದೇಶವಾದ್ಯಂತವನ್ನು ನೋಡಿ, ಸಣ್ಣಸಣ್ಣ ಪ್ರದೇಶಗಳನ್ನು ಪರೀಕ್ಷಿಸಿದಲ್ಲಿ ಅದರ ಮೇಲೂ ಆಧಾರಪಡುವಂತಿಲ್ಲ. ಆದುದರಿಂದ ಪುರಾತನಕಾಲದಿಂದಲೂ ವ್ಯವಸಾಯವು ಪ್ರಭುತ್ವದ ಪ್ರಮುಖ ಕರ್ತವ್ಯಗಳಲ್ಲೊಂದಾಗಿದೆ. ವೈಯಕ್ತಿಕ ಧರ್ಮಕಾರ್ಯಗಳಿಂದ ಭಾವಿಗಳು ತೋಡಲ್ಪಟ್ಟವು; ಕೆರೆಕಟ್ಟೆಗಳು ಕಟ್ಟಲ್ಪಟ್ಟವು [೧] ಪ್ರಭುತ್ವವು ನದಿಯ ನೀರಿಗೆ ಅಣೆಕಟ್ಟೆ ಹಾಕಿ ದೊಡ್ಡ ದೊಡ್ಡ ಕೆರೆಗಳನ್ನು ನಿರ್ಮಿಸಿ, ಅಗತ್ಯವಾದ ಜಲಾಶಯವನ್ನು ಒದಗಿಸಲು ಕಾಲುವೆಗಳನ್ನು ತೋಡಿಸಿತು. ಆಂಗ್ಲೇಯ ಪ್ರಭುತ್ವದ ಆಳಿಕೆಯಲ್ಲಿ ರೈಲ್ವೆಗಳು ಪ್ರಭುತ್ವದ ಆದರವನ್ನು ಪಡೆದು, ವ್ಯವಸಾಯವು ಮಾತ್ರ ಪ್ರಭುತ್ವದಿಂದ ಏನೋ ಆಗಾಗ್ಗೆ ಕೊಂಚ ಆದರವನ್ನು ಪಡೆಯುತ್ತಿದ್ದಿತು. ಇದರ

೧ ಕೆ. ಟಿ. ಷಾರವರ 'ಅರವತ್ತು ವರುಷದಲ್ಲಿ ಹಿಂದೂದೇಶದ ಆರ್ಥಿಕ ಸ್ಥಿತಿ' ಪು. ೨೯೪.

ಫಲವಾಗಿ ವ್ಯವಸಾಯ ಮಾಡುವ ಜಮೀನಿನಲ್ಲಿ ಅರ್ಧಕ್ಕಿಂತಲೂ ಹೆಚ್ಚಾಗಿ ಪ್ರಜೆಗಳ ಸ್ವಂತ ಪ್ರಯತ್ನದಿಂದಲೂ, ವೈಯಕ್ತಿಕ ಕಾರ್ಯಾಚರಣೆಯಿಂದಲೂ ನಡೆಸುವುದರ ಮೇಲೆ ಆಧಾರಪಟ್ಟಿದ್ದಿತು. ಈ ಶತಮಾನದಾರಂಭದಿಂದ ಮಾತ್ರ, ವ್ಯವಸಾಯದ ವಿಚಾರದಲ್ಲಿ ಒಂದು ನಿಶ್ಚಯವಾದ ನೀತಿಯು ಏರ್ಪಟ್ಟಿರುವಂತೆ ಕಾಣುವುದು. ಆದರೆ ವ್ಯವಸಾಯದ ಆಗತ್ಯಗಳಿಂದ ರೂಪುಗೊಳ್ಳದೆ ಆರ್ಥಿಕ ಅವಸರಗಳನ್ನೇ ಅವಲಂಬಿಸಿದೆ. ಇತರ ಪ್ರಭುತ್ವ ವೆಚ್ಚಗಳಿಗಿಂತಲೂ ಇದರ ಪ್ರಾಮುಖ್ಯತೆಯನ್ನು ಸರಕಾರವು ಪರಿಗಣಿಸಿ ಮುಂದುವರಿಯುತ್ತಿಲ್ಲ.

## ಬಡ್ಡಿ

ಈ ಬಾಬಿನಲ್ಲಿರುವ ಅಂಶಗಳನ್ನೆಲ್ಲಾ ಒಡೆದು ನೋಡಿದರೆ, ಈ ಆದಾಯವು ಯಾವ ಯಾವ ಆಧಾರಗಳಿಂದ ತುಂಬಿ ಬರುತ್ತಿದೆಯೆಂಬುದು ತಿಳಿಯುತ್ತದೆ.

ಹಿಂದೂದೇಶದಲ್ಲಿ:—

| | |
|---|---|
| ಸಂಸ್ಥಾನಗಳಿಗೂ, ಸ್ಥಳೀಯ ಸಂಸ್ಥೆಗಳಿಗೂ ಕೊಟ್ಟಿರುವ ಸಾಲಗಳು | ೨೬೭ |
| ರೈಲ್ವೆಗಳು; ಸಾಲಗಳು ಮತ್ತು ಜಾಗ್ರತ ನಿಧಿಗೆ .. .. | ೪೨ |
| ವ್ಯವಸಾಯಗಾರರಿಗೆ .. .. .. .. .. | ೩೧ |
| ಚಿಲ್ಲರೆ .. .. .. .. .. .. | ೨೯ |
| | ೩೬೯ |
| ಇಂಗ್ಲೆಂಡಿನಲ್ಲಿ .. .. .. .. .. | ೩೨೭ |
| ಲಕ್ಷ ರೂಪಾಯಿಗಳು .. | ೬೯೬ |

ಸಾಮಾನ್ಯವಾಗಿ ಸರಕಾರದ ವರದಿಗಳಿಂದ ತಿಳಿಯುವಂತೆ, ಬಡ್ಡಿಯ ದರ ಮುಂತಾದ ವರದಿಗಳು ಬರುತ್ತಿಲ್ಲ. ಒಂದುವೇಳೆ ಬಡ್ಡಿಯ ದರವು ಹೆಚ್ಚು ಕಡಿಮೆ ಒಂದೇ ಸಮನಾಗಿದೆಯೆಂದುಕೊಂಡರೆ, ಆಗ ಅರ್ಧಕ್ಕಿಂತಲೂ ಹೆಚ್ಚಿನ ಮೊತ್ತವು ಇಂಗ್ಲೆಂಡಿನಲ್ಲಿ ಬಡ್ಡಿಗೆ ಕೊಡಲ್ಪಡುತ್ತದೆ. ಇದರಿಂದ ಹಿಂದೂದೇಶದ ವೃತ್ತಿ, ಉಪವೃತ್ತಿಗಳು ಬಂಡವಾಳವಿಲ್ಲದೆ ಮೂಲೆಗೆ ಬಿದ್ದಿವೆಯಲ್ಲದೆ ವ್ಯವಸಾಯಗಾರನೂ ಸರಕಾರದ ಕೈಯಲ್ಲಿರುವ ಹಿಂದೂದೇಶದ ಹಣದ ಮೇಲೆ ಬರುವ ನೂರಕ್ಕೆ ೫ ರ ಬಡ್ಡಿಯಿಂದ ತನ್ನ ಲಾಭವನ್ನು ಪಡೆಯ

ಬೇಕಾಗಿದೆ. ಕೆಲವು ತಿಂಗಳ ಕೆಳಗೆ, ಸುಪ್ರಸಿದ್ಧ ಇಂಜನಿಯರೂ ಅರ್ಥಶಾಸ್ತ್ರವೇತ್ತರೂ ಆದ ಸರ್ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು, ಪೂನಾದಲ್ಲಿ ಕೆಲವು ತರುಣರಿಗೆ ವಿಶ್ವವಿದ್ಯಾಲಯದಲ್ಲಿ ಉಪದೇಶ ಮಾಡುತ್ತ 'ಈ ದೇಶದ ಕೆಲವು ಮಂದಿ ಯುವಕರು ಪರದೇಶಗಳಿಗೆ ಹೋಗಿ ವಿದ್ಯಾರ್ಜನೆ ಮಾಡಿಕೊಂಡು ಬಂದು, ಕೆಲವು ಕೈಗಾರಿಕೆಗಳನ್ನಿಲ್ಲಿ ಸ್ಥಾಪಿಸಲು ಪ್ರಯತ್ನಿಸಿದರಾದರೂ ಅವರಲ್ಲಿ ಅನೇಕರು ಹಾಳಾಗಿರುವರು. ಇದಕ್ಕೆ ಮುಖ್ಯ ಕಾರಣವೆಂದರೆ, ಪ್ರಭುತ್ವದ ಪ್ರೋತ್ಸಾಹವೂ, ದೇಶದಲ್ಲಿನ ಹಣದ ವ್ಯವಸ್ಥೆಯೂ ಅನನುಕೂಲವಾಗಿರುವುದೆ. ಇಂತಹ ವಿಚಾರಗಳಲ್ಲಿ ಸಾರ್ವಜನಿಕ ಅಭಿಪ್ರಾಯವೇನೂ ಅವರಿಗೆ ಹಿತಕಾರಿಯಾಗುವಂತಿಲ್ಲ. ಅಲ್ಲದೆ ಪ್ರಭುತ್ವವೂ ಯಾವ ವಿಧವಾದ ಶ್ರದ್ಧೆಯನ್ನು ವಹಿಸುವಂತೆ ತಿಳಿದುಬಂದಿಲ್ಲ' ಎಂದು ಹೇಳಿರುವರು.[೧] ಕಲಕತ್ತೆಯ ಸರ್ ಡೇನಿಯಲ್ ಹಾಮಿಲ್ಟನ್‌ರು ಈ ಕೆಳಗೆ ಕಂಡಂತೆ ವರ್ಣಿಸಿರುವರು:[೨] 'ಹೆಚ್ಚಾಗಿ ರೈತರಲ್ಲಿ ಉಳಿದ ಧಾನ್ಯವನ್ನು ಸಾಗಿಸಲು ನಾವು ಅವರಿಗೆ ರೈಲ್ವೆಯನ್ನು ಕೊಟ್ಟಿದ್ದೇವೆ. ಆದರೆ ತಕ್ಕ ಬೆಲೆಯನ್ನು ಮತ್ತೆ ಹಿಂದಕ್ಕೆ ತಂದು ಅವರಿಗೆ ಕೊಡಲು ಸರಿಯಾದ ಲೇವಾದೇವಿಯ ವಿಧಾನವನ್ನು ಒದಗಿಸಿಲ್ಲ. ಇಲ್ಲಿನ ಹೆಚ್ಚಾದ ಬೆಳೆಯನ್ನು ಪ್ರಪಂಚವೇ ತೆಗೆದುಕೊಳ್ಳುತ್ತದೆ. ಸಾಹುಕಾರನೂ ವರ್ತಕನೂ ಹಣವನ್ನು ತೆಗೆದುಕೊಳ್ಳುತ್ತಾರೆ. ಆದರೆ ಪ್ರಜೆಗಳಿಗೆ ಪಿಶಾಚಿ ಹಿಡಿಯುತ್ತಿದೆ.' ದೇಶದಲ್ಲಿರುವ ಪ್ರಾಕೃತಿಕ ಸಂಪತ್ತನ್ನು ತನ್ನ ಗಡಿಯಿಂದ ಹೊರಗೆ ಉಪಯೋಗಕ್ಕೆ ಬಿಟ್ಟಾಗ, ಆ ದೇಶದ ಜನರು ಸಂಪತನ್ನು ಸಂಗ್ರಹಿಸಬಲ್ಲರೆ? ಪ್ರಭುತ್ವದ ಮನಸ್ಸಿನಲ್ಲಿಯೇ ಅವರ ಹಿತಚಿಂತನೆಯಲ್ಲದೆ ಮತ್ತೊಂದು ಬೇರೂರಿರುವಾಗ ಅವರು ದರಿದ್ರರಾಗದೆ ಮತ್ತೇನಾಗಿರಬಲ್ಲರು?

—

೧ ಸರ್ ಎಂ. ವಿಶ್ವೇಶ್ವರಯ್ಯನವರ 'ದೇಶದಲ್ಲಿ ತಕ್ಷಣ ಅಗತ್ಯವಾಗಿ ಆಗಬೇಕಾದುವು' ಮೈಸೂರಿನ ಆರ್ಥಿಕ ಪತ್ರಿಕೆ, ಸಂಪುಟ XIV ಸಪ್ಟೆಂಬರ ೧೯೩೮ ಪು ೪೧೯.

೨ ಸರ್ ಡಾನಿಯಲ್ ಹಾಮಿಲ್ಟನ್‌ರವರ 'ಹಿಂದೂದೇಶ—ಇಂದು ಮತ್ತು ನಾಳೆ' ಕಲಕತ್ತಾ ರಿವ್ಯೂ, ೧೯೧೬ ಜುಲೈ, ಪುಟ ೨೯೫.

## ೬. ಸಾರಾಂಶ

ಯಾವ ಮಹಾಸಾಮ್ರಾಜ್ಯವೇ ಆಗಲಿ ಒಡೆದು ಭಿನ್ನವಾದಾಗ, ತಮಗೆ ಸಿಕ್ಕಷ್ಟು ಬಲವನ್ನು ಗಳಿಸಿಕೊಳ್ಳಬೇಕೆಂದು ಆಶಾಪರರಾದವರೆಲ್ಲರೂ ತಮ್ಮತಮ್ಮೊಳಗೆ ಕಚ್ಚಾಡಿಕೊಳ್ಳುವುದು ಸಹಜವಾಗಿದೆ. ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯು ಲಾಭ ಸಂಪಾದನೆಯ ಉದ್ದೇಶದಿಂದ ಸ್ಥಾಪಿತವಾದ ಸಂಸ್ಥೆಯಾಗಿದ್ದುಕೊಂಡು, ಆಗಿನ ಸಮಯ ಸನ್ನಿವೇಶಗಳನ್ನೂ ತನಗಿದ್ದ ಅವಕಾಶವನ್ನೂ ಉಪಯೋಗ ಮಾಡಿಕೊಂಡು, ದೆಹಲಿಯ ಸಾರ್ವಭೌಮನ ಸಾರ್ವಭೌಮತ್ವವನ್ನೇ ಕಸಿದುಕೊಂಡು ಬಿಟ್ಟಿತು. ಪ್ರಾಯಶಃ ಆಗಿನ ಕಾಲದಲ್ಲಿದ್ದ ಅವ್ಯವಸ್ಥಿತ ಪರಿಸ್ಥಿತಿಯನ್ನು ಗಮನಿಸಿದರೆ, ಮೊಗಲ ಚಕ್ರಾಧಿಪತ್ಯವು ಅಧೋಗತಿಗೆ ಇಳಿಯುತ್ತಿರುವಾಗ, ಬೇಕಾದ ಯುದ್ಧದ ಖರ್ಚನ್ನು ಜೋಡಿಸಲು ಆ ಸುಪ್ರಸಿದ್ಧ ಮೊಗಲ ಬಾದಷಾಹಿಗಳಲ್ಲಿ ಕೊನೆಯ ಬಾದಷಾಹಿಯ ವಿಶೇಷ ಬಾಧೆಯಿಂದ ಹಿಂದೂದೇಶದಲ್ಲಿ ತೆರಿಗೆಯು ಬಹಳ ಹೆಚ್ಚಾಗಿದ್ದಿತಲ್ಲದೆ ದೇಶದ ಆರ್ಥಿಕಪರಿಸ್ಥಿತಿಯು ಅತ್ಯಂತ ಅಲ್ಲೋಲಕಲ್ಲೋಲ ಸ್ಥಿತಿಯಲ್ಲಿದ್ದಿತು. ಆಂಗ್ಲೇಯರಲ್ಲಿಯೂ ಹಿಂದಿನಂತೆಯೆ ರಾಜಭಕ್ತಿಯನ್ನು ತೋರಿಸುವುದಕ್ಕಾಗಿ ಈ ಅನ್ಯಾಯವಾದ ತೆರಿಗೆಗಳೆಲ್ಲವೂ ಹಾಗೆಯೇ ಶಾಂತಿಯ ಸಮಯಗಳಲ್ಲೂ ನಡೆದುಕೊಂಡು ಬರಸಾಗಿದುವು. ಅದರ ವ್ಯವಸ್ಥೆಯಲ್ಲಿ ಬಿಕ್ಕಟ್ಟು ಹೆಚ್ಚಾದುದರಿಂದಲೂ, ಆಡಳಿತದಲ್ಲಿ ಬರಬಹುದಾದ ಲೋಪಗಳಿಗೆ ಅವಕಾಶ ಕೊಡದಿದ್ದುದರಿಂದ ಆಯಾ ಪ್ರಾಂತ್ಯಗಳಲ್ಲಿ ವಸೂಲಾಗುತ್ತಿದ್ದ ಅವೇ ತೆರಿಗೆಗಳೇ ಮೊಗಲರ ಆಳ್ವಿಕೆಯಲ್ಲಿ ವಸೂಲಾಗಿ ಬರುತ್ತಿದ್ದುದಕ್ಕಿಂತಲೂ ಹೆಚ್ಚಾಗಿ ಉತ್ಪನ್ನವನ್ನು ತರುತ್ತಿದ್ದವು. ಆಗ ಆದೇಸು ಅವರ ರಕ್ಷಣೆಗೊಪ್ಪಿಸಲ್ಪಟ್ಟ ಪಾರುಪತ್ತೇಗಾರ ಪ್ರಭುತ್ವ ಲಕ್ಷಣವಾಗಿರಲಿಲ್ಲ. ಹಾಗಲ್ಲದೆ ಆಗ ಅವರದು ಬರಿಯ ವ್ಯಾಪಾರದ ಪ್ರಾಮಾಣಿಕ ಕರ್ತವ್ಯವಾಗಿದ್ದಿತು. ಈ ಅಭಿಪ್ರಾಯವು ಇತ್ತೀಚೆಗೆ ಬೆಳೆದು, ಆಂಗ್ಲೇಯರಿಗೆ ಹಿಂದುಸ್ಥಾನದ ಮೇಲಿರುವ ಹಿಡಿತವನ್ನು ಸಮರ್ಥಿಸುವದಕ್ಕಾಗಿ ತರ್ಕಮಾಡುತ್ತ ಮಾಡುತ್ತ ಬಂದುದಾಯಿತು. ಆಂಗ್ಲೇಯರು ಬಂದು ನೆಲಸುವ ಮೊದಲ ದಿನಗಳಲ್ಲಿ, ಕ್ಲೈವ್, ವಾರನ್ ಹೇಸ್ಟಿಂಗ್ಸ ಮೊದಲಾದ ಸಾಮ್ರಾಜ್ಯ ನಿರ್ಮಾಣಕರು, ದೇಶದಲ್ಲಿ ತಮ್ಮ ಕೈಗೆ ಸಿಕ್ಕ ಸಿರಿಸಂಪತ್ತನ್ನೆಲ್ಲಾ ಸೂರೆಮಾಡಿದರು. ಇದು ಆಂಗ್ಲೇ

ಯರಿಗೆ ಹೊಸ ಯಂತ್ರವನ್ನು ಕಂಡುಹಿಡಿದುದರ ಪರಿಣಾಮವಾಗಿ ಏರ್ಪ ಡಿಸಬಹುದಾದ ಕೈಗಾರಿಕೆಗಳಿಗೆ ಅವಶ್ಯವಾದ ಕೋಟ್ಯಾಂತರ ಬಂಡವಾಳ ವನ್ನೊದಗಿಸಿ ಯುರೋಪಖಂಡದಲ್ಲಿ ನಡೆದ 'ಕೈಗಾರಿಕೆಯ ಯುಗ ಪರಿ ವರ್ತನೆ'ಗೆ ಹಾದಿ ಹಾಕಿಕೊಟ್ಟರು. ಯಾವ ರೀತಿಯಲ್ಲಿ ಯುರೋಪ ಖಂಡವು ಅಭಿವೃದ್ಧಿಹೊಂದಿ ಮುಂದುವರಿಯುತ್ತ ಬಂದಿತೋ, ಅದರಲ್ಲಿಯೂ ಇಂಗ್ಲೆಂಡು ಹೇಗೆ ಸಂಪದಭಿವೃದ್ಧಿ ಸಾಧನೆಯಲ್ಲಿ ಮುಂದೆ ಹೆಜ್ಜೆ ಹಾಕುತ್ತ ಬಂದಿತೋ, ಹಾಗೆ ಅದೇ ಪ್ರಮಾಣದಲ್ಲಿ ಹಿಂದೂದೇಶವು ನಷ್ಟಪಡುತ್ತ. ತನ್ನ ದೇಶದ ಆರ್ಥಿಕಜೀವನದ ಇತಿಹಾಸದಲ್ಲಿ ಅಧೋಗತಿಯ ಮಾರ್ಗವನ್ನು ಪ್ರಾರಂಭಿಸಿತು. ಇಂಗ್ಲೆಂಡು ತನ್ನ ಗೂಡನ್ನು ತನಗೆ ಸಿಕ್ಕ ಪದಾರ್ಥಗಳಿಂದ ಜೋಡಿಸಿ ಕಟ್ಟಿಕೊಳ್ಳಬೇಕೆಂದೇ ಮಾಡಿದ್ದ ವ್ಯೂಹವನ್ನು ಅದು ಶಕ್ತಿಗೆ ಮೀರಿ ಚೆನ್ನಾಗಿಯೇ ಮಾಡಿಕೊಂಡಿತು. ಸ್ಥಾಪನೆಯಲ್ಲಿ ಈಸ್ಟ ಇಂಡಿಯಾಕಂಪನಿಯು ವ್ಯಾಪಾರಸಂಸ್ಥೆಯು ಮಾತ್ರವಾಗಿದ್ದಿತು. ಆದುದರಿಂದ ಅದರ ರೀತಿನೀತಿಯಲ್ಲಿ ಹಿಂದೂದೇಶದ ಹಿತದೃಷ್ಟಿಯಿರಬೇಕೆಂದು ಊಹಿಸುವುದು ಕಷ್ಟವಾಗುತ್ತದೆ. ವೈಯಕ್ತಿಕ ಕಾರ್ಯಾಚರಣೆಗಳೆಲ್ಲವೂ ಇದ್ದಂತೆ ಅದೂ ತನ್ನ ತಾತ್ಕಾಲಿಕ ಲಾಭ ಸಂಪಾದನೆಯ ದೃಷ್ಟಿಯನ್ನು ಹೊಂದಿದ್ದಿತಲ್ಲದೆ ಶಾಶ್ವತವಾಗಿ ಸುಖ ಕೊಡುವ ಸಂಯೋಜನೆಯ ದೃಷ್ಟಿಯಿಂದಿರಲಿಲ್ಲ. ಹಿಂದೂದೇಶಕ್ಕೆ ಹಿತವಾಗ ಬೇಕೆಂಬುದನ್ನು ಅಂಗೀಕರಿಸಿದ್ದೇ ಆದರೆ, ಅದು ಪ್ರಪಂಚದಲ್ಲಿ ಇಂಗ್ಲೆಂಡ ಆರ್ಥಿಕ ಸಾರ್ವಭೌಮತ್ವವನ್ನು ಪಡೆದುಕೊಂಡಿರುವುದಕ್ಕೆ ಅಡಿಯಾಳಾ ಗಿಯೇ ಇರಬೇಕಾಗಿದೆ. ತನ್ನ ಸ್ವಾರ್ಥ ಸಾಧನೆಯನ್ನು ಪಡೆಯುವುದರಲ್ಲಿ ಆ ಶಿಖರವನ್ನು ಏರುವುದರಲ್ಲಿ ಹಿಂದೂದೇಶವು ಅದಕ್ಕೊಂದು ಏಣಿಯನ್ನು ಅಣಿಮಾಡಿತು. ತಮ್ಮ ಕಾರ್ಯಗಳಿಂದ ಬರುವ ಪರಿಣಾಮಗಳನ್ನು ಆಂಗ್ಲೇ ಯರು ತಿಳಿದಿದ್ದರೋ ಇಲ್ಲವೋ, ಮೊಗಲ ಸಾಮ್ರಾಜ್ಯವು ನಾಶ ಹೊಂದಿದ ಕಾಲದಲ್ಲಿದ್ದ ಆರ್ಥಿಕ ಮುಗ್ಗಟ್ಟಿನ ಬಾಧೆಯು, ಪರದೇಶಿಯರ ಪ್ರಭುತ್ವದ ರೀತಿನೀತಿಗಳಿಂದ, ಅದರ ತೀವ್ರತೆಯು ಹೆಚ್ಚಾಗಿ ಭಯಂಕರ ಕ್ಷೀಣ ಗತಿಯು ಬಂದೊದಗಿತು.

ಇಂಗ್ಲೆಂಡಿನಲ್ಲಿ ಫ್ಯಾಕ್ಟರೀ (ವೃತ್ತಿಕೇಂದ್ರೀಕರಣ) ಪದ್ಧತಿಯು ತೀವ್ರಗತಿಯಿಂದ ಅಭಿವೃದ್ಧಿಹೊಂದುತ್ತಿತ್ತು. ಆ ವೃತ್ತಿಕೇಂದ್ರಗಳಿಗೆ

ಬೇಕಾದ ಕಚ್ಚಾ ಪದಾರ್ಥಗಳನ್ನು ಒದಗಿಸಲು ಹಿಂದೂದೇಶವೊಂದು ವಸಹಾತಾಗಿ ಉಪಯೋಗಿಸಲ್ಪಟ್ಟಿತು. ಇಂಗ್ಲೆಂಡಿನಲ್ಲಿರುವ ಕುಬೇರರ ಅಂಕಿ ಅಧಿಕಾರಗಳಲ್ಲಿ ಇಂಗ್ಲೆಂಡವೂ ಹಿಂದೂದೇಶವೂ ಒಂದೇ ಸಾಲಿನಲ್ಲಿ ನಿಂತಿರುವ ಏಕೈಕ ವ್ಯಕ್ತಿಯಂತಿದ್ದವು. ಅದರಲ್ಲಿ ಹಿಂದೂದೇಶದ ಪಾತ್ರವು ' ಏಕೆಂದು ಕಾರಣವನ್ನು ಕೇಳುವದಕ್ಕಲ್ಲ; ಅವರಿಗಾಗಿ ದುಡಿಯುವುದಕ್ಕೂ ಹಾಗೆಯೇ ಸಾಯುವುದಕ್ಕೂ ' ಹಿಂದೂದೇಶದಲ್ಲಿ ಇಂತಹ ಪಾಶವೀ ಶಕ್ತಿಯೇ ತೆರಿಗೆ ಸುಂಕಗಳನ್ನು ವಿಧಿಸುವ ವಿಧಾನವನ್ನು ರೂಪುಗೊಳಿಸಿದುದು. ಮ್ಯಾಕ್ಡೊನಾಲ್ಡರು, ಪ್ರಭುತ್ವದ ಆಡಳಿತ ನೀತಿಯ ಫಲವಾಗಿ ಹಿಂದೂದೇಶದ ಹಿತಕ್ಕೇ ಧಕ್ಕೆಯಾಗಿರುವುದನ್ನು ವಿವರಿಸುತ್ತಾ, ಆದರಿಂದ ಆಂಗ್ಲೇಯರ ಧ್ಯೇಯವೇ ಕೆಟ್ಟದಾಗಿತ್ತೆಂದು ತಿಳಿಯಲಾಗುವದಿಲ್ಲವೆಂದು ವಾದಿಸಿರುವರು; ಆದರೆ ಅದನ್ನು ' ಪ್ರಭುತ್ವವು [1] ಲಾಂಕಷೈರಿನ ಹಿತಕ್ಕೆ ಅನುಕೂಲವಾಗಿರುವ ಪ್ರಪಂಚವ್ಯಾಪಾರದ ನೀತಿಯನ್ನು ಆಚರಣೆಯಲ್ಲಿಟ್ಟುದುದರಿಂದ ಹೀಗಾಯಿತೆಂದು ನಂಬಬಹುದು ' ಎಂದು ಸಮರ್ಥಿಸಿರುವರು. ಒಂದು ವೇಳೆ ಒಬ್ಬ ವ್ಯಕ್ತಿಯ ಕಷ್ಟತೀರ್ಮಾನದ ಫಲವಾಗಿದ್ದರೂ ಅಥವಾ ಆಡಳಿತದ ಅಧಿಕಾರ ಸೂತ್ರಗಳನ್ನು ಹಿಡಿದಿರುವವರು ವಂಶಾನುಗುಣವಾಗಿ ಮಾಡಿದ ತಪ್ಪಿನಿಂದಲಾದರೂ ಆಗಿದ್ದರೆ ಆಗ ಈ ವಾದವನ್ನು ಒಪ್ಪಬಹುದಾಗಿತ್ತು. ಆದರೆ ಅನೇಕ ಕಲಾಂತರಗಳಿಂದಲೂ ಪ್ರತಿ ಹತ್ತು ಹತ್ತು ವರುಷಗಳಲ್ಲಿಯೂ ಇದೇ ನೀತಿಯೇ ಆಚರಣೆಯಲ್ಲಿ ತರಲಾಗುತ್ತಿದೆಯೆಂಬುದನ್ನು ತಿಳಿದುಕೊಂಡಾಗ, ಮ್ಯಾಕ್ಡೊನಾಲ್ಡರ ವಾದವು ಆಂಗ್ಲೇಯ ವಿಶ್ವವಿದ್ಯಾನಿಲಯ ಗಳಲ್ಲಿ ತಯಾರಾದವರಲ್ಲಿ ಉತ್ತಮರಾದವರನ್ನು ಹಿಂದೂದೇಶದ ಅಧಿಕಾರಿಗಳನ್ನಾಗಿ ಆರಿಸಿ ತರುತ್ತಿರುವರೆಂದ ಮೇಲೆ, ಅವರ ಜ್ಞಾನ, ವಿವೇಕಗಳನ್ನು ವಿಮರ್ಶೆಗೆ ತಂದೊಡ್ಡಿದಂತಾಗುವುದು. ಹಿಂದೂದೇಶದಲ್ಲಿ ಆಡಳಿತ ಸೂತ್ರವನ್ನು ವಹಿಸಿರುವ ಅಧಿಕಾರಿಗಳ ಜ್ಞಾನ ವಿವೇಕಗಳನ್ನು ಸಂದೇಹದಿಂದ ಒರೆಯಿಡಬೇಕಾದ ಸಮಸ್ಯೆಯನ್ನು ಯಾರೂ ಅಂಗೀಕರಿಸಲಾಗುವುದಿಲ್ಲ. ಆದರೆ ಅವರ ಗುರಿಯು ಹಿಂದೂದೇಶದ ಹಿತಕ್ಕೆ ವಿರೋಧವಾಗಿದ್ದಿತೆಂದರೆ, ತಮ್ಮ ದೇಶದ ಸೌಖ್ಯವನ್ನೇ ಅವರು ಮೊದಲು ನೋಡಿಕೊಂಡ

೧ ರಾಂಸೆ ಮ್ಯಾಕ್ಡೊನಾಲ್ಡರ ' ಹಿಂದೂದೇಶದ ಆಡಳಿತ ' ಪುಟ ೧೨೮—೨೯

ರೆಂದರೆ ಅದು ಮಾನವ ಸ್ವಭಾವವಾಗಿಯೇ ಇದೆಯೆನ್ನಬಹುದು. ಅಲ್ಲದೆ ಈಗೊಂದು ಶತಮಾನದಲ್ಲಿ ನಡೆದಿರುವ ಘಟನೆಗಳನ್ನು ಪರಿಶೀಲಿಸಿ ಹಾಗೆ ತೀರ್ಮಾನಿಸಿಕೊಳ್ಳಬಹುದಾಗಿದೆ. ಈ ಕಾಲದಲ್ಲೆಲ್ಲ ಭಾರತೀಯ ಮುಖಂಡರು ಪ್ರಭುತ್ವದ ನೀತಿಯಿಂದಾಗುತ್ತಿರುವ ದುಷ್ಪರಿಣಾಮಗಳನ್ನು ಎಡೆಬಿಡದೆ ತಿಳಿಸುತ್ತಿದ್ದರೆಂಬುದನ್ನು ನಾವು ನೆನಪಿಗೆ ತಂದುಕೊಂಡಾಗ, ವಿವೇಕ ಯುತರೂ ಆದರೂ ಪ್ರೌಢ ಚಿತ್ತರೂ ಆದ ಅಧಿಕಾರಿಗಳಿಂದ ಏನೂ ತಿಳಿ ಯದೆ, ಈ ವಿನಾಶಕಾರಕ ನೀತಿಯು ಆಚರಣೆಯಲ್ಲಿಡಲ್ಪಟ್ಟಿತೆಂದು ನಂಬ ಬೇಕೆಂದು ನಮ್ಮನ್ನು ಕೇಳುವುದು ನಮ್ಮಲ್ಲಿರುವ ಸುಲಭವಾಗಿ ನಂಬುವ ಗುಣವನ್ನು ಬಹಳವಾಗಿ ದೂರ ಎಳೆದಂತಾಗುತ್ತದೆ.

ಈ ವ್ಯೂಹವನ್ನು ನಡೆಸಲು ರೈಲ್ವೆಗಳು ಅಭಿವೃದ್ಧಿ ಮಾಡಲ್ಪಟ್ಟವು. ಭೇದ ಭೇದಗಳನ್ನು ತೋರಿಸುವ ದರಗಳು ತೆರಿಗೆಯಿಂದ ಬರುವ ಆದಾಯ ವನ್ನು ಹೆಚ್ಚಿಸಿದುವು. ಎಲ್ಲವೂ ಹೊಂದಿಕೆಯಂತ ಕೆಲಸ ಮಾಡುತ್ತಿದ್ದುವು. ಆದರೆ ಹಿಂದೂದೇಶದಲ್ಲಿ ಬೇಸರಗೊಂಡ ಚಳವಳಿಗಾರರಿಂದಲೂ, ಇಂಗ್ಲೆಂಡಿ ನಲ್ಲಿರುವ ತಪ್ಪು ದಾರಿಗೆಳೆಯಲ್ಪಡುತ್ತಿರುವ ಹೊಣೆಗಾರ ಪ್ರಮುಖರಿಂದಲೂ ಯಾವಾಗಲೂ ವಿರೋಧ ಭಾವನೆಯ ಕೂಗು ಕೇಳಬರುತ್ತಲೇ ಇದ್ದಿತು. ಮುಖ್ಯವಾಗಿ ಈಸ್ಟ ಇಂಡಿಯಾ ಕಂಪೆನಿಯವರ ಸ್ವಾರ್ಥಸಾಧನೆಯ ರೀತಿಯೇ ಆಂಗ್ಲೇಯರ ಅರಸುತನವು ಹಿಂದೂದೇಶದ ರಕ್ಷಣೆಯ ಜವಾಬ ದಾರಿಯನ್ನು ವಹಿಸಿದ ಮೇಲೂ ಅದೇ ರೀತಿಯಲ್ಲಿಯೇ ನಡೆಯುತ್ತ ಬಂದಿತು. ಅದು ಯಾವ ವಿಧದಲ್ಲಿಯೂ ವಾಣಿಜ್ಯ ಸಂಸ್ಥೆಯಾಗಿರಲಿಲ್ಲ. ಅದು ವಹಿಸಿ ರುವ ಜವಾಬ್ದಾರಿಯನ್ನು ದೈವಿಕ ನಿಯಮಾನುಸಾರ ದೀರ್ಘಧ್ವನಿಯುತ ವಾದ ಕಹಳೆಗಳು ಸಾರುತ್ತಿದ್ದವು. ಆದರೆ ಈ ಗಾನದ ಸುಖವನ್ನು ತಿಳಿ ಯುವ ಶಕ್ತಿಯನ್ನು ಪಡೆದಿಲ್ಲದ ಆ ದೇಶೀಯ ಪ್ರಜೆಗಳು ಅದರಲ್ಲಿ ಸಾಮ್ರಾಜ್ಯ ಶಾಹಿತ್ವದ ಹಸಿವಿನ ಆರ್ಭಟವನ್ನೇ ಕೇಳುತ್ತಿದ್ದರು.

ಈ ವಿಧವಾದ ರಾಜಕೀಯ ಹಾಗು ಐತಿಹಾಸಿಕ ಹಿನ್ನೆಲೆಯಿರುವಾಗ ಆಗ ಆಚರಣೆಯಲ್ಲಿಡಲ್ಪಟ್ಟ ಆರ್ಥಿಕ ನೀತಿಯನ್ನು ತಿಳಿದುಕೊಳ್ಳುವುದು ಸುಲಭವಾಗಿರುತ್ತದೆ. ಹಿಂದೂದೇಶವು ಎಷ್ಟೆಷ್ಟು ಕೊಡಬೇಕೋ ಅಷ್ಟಷ್ಟು ಕೊಡುತ್ತ ಬಂದಿತು. ಅದಕ್ಕೆ ಪ್ರತಿಯಾಗಿ ಜೀವಸಹಿತವಾಗಿರಿಸಿಕೊಳ್ಳುವ

ಅಲ್ಪಸ್ವಲ್ಪ ಆಗತ್ಯಗಳನ್ನು ಪಡೆಯಲಾಗುತ್ತಿರಲಿಲ್ಲ. ವಾಸ್ತವವಾಗಿಯೂ, ಯಾರೊ ಒಬ್ಬರು ಹೇಳಿರುವಂತೆ, 'ಹಿಂದೂದೇಶವು ಎರಡು ವಿಧವಾಗಿ ಆಶೀರ್ವದಿಸಲ್ಪಟ್ಟಿರುವುದು. ಮೊದಲನೆಯದಾಗಿ ತಾನು ಇಂಗ್ಲೆಂಡಿಗೆ ವ್ಯಾಪಾರ ಲಾಭದಿಂದ ಗಳಿಸಿಕೊಡುತ್ತಿರುವುದರಿಂದ ಆಶೀರ್ವದಿಸಲ್ಪಟ್ಟಿರುವುದು. ಎರಡನೆಯದಾಗಿ ವಿಶೇಷ ಹೆಚ್ಚಿನ ಬೆಲೆಗಳಿಂದ ಅದು ಪಡೆಯುತ್ತಿರುವ ರಕ್ಷಣೆಯ ಲಾಭದಿಂದ ಆಶೀರ್ವದಿಸಲ್ಪಟ್ಟಿರುವುದು.' ದೇಶದ ಪ್ರಜಾಸಮುದಾಯದ ಸಾಮಾನ್ಯ ಸಂಪಾದನೆಯ ಅಭಿವೃದ್ಧಿಯನ್ನು ಪರಿಗಣಿಸುವಂತೆ ಸಾಧಾರಣ ಆರ್ಥಿಕ ರಚನೆಯು ರೂಪುಗೊಂಡಿಲ್ಲ. ಒರಿಯು ಬಂಡವಾಳವನ್ನು ಸುರಿಯಬೇಕಾದ ವೆಚ್ಚದ ಬಾಬುಗಳಲ್ಲಿ ಬಹಳವಾಗಿ ಹಣವು ಸುರಿಯಲ್ಪಟ್ಟಿರುವುದು. ಇದರಿಂದ ಸಾಮಾನ್ಯ ಪ್ರಜಾಸಮುದಾಯಕ್ಕೆ ಸಂಪಾದನೆಯಲ್ಲಿ ವೃದ್ಧಿಹೊಂದಲು ಎಳ್ಳಷ್ಟು ನೆರವಾಗುವಂತಾಗಿಲ್ಲವಾಗದೆ ಇನ್ನೂ ಇತರ ಅತ್ಯಾವಶ್ಯಕ ದೇಶಾಭಿವೃದ್ಧಿಯ ಕಾರ್ಯಗಳಿಗೆ ಯಾವ ಬಂಡವಾಳವೂ ಸರಿಯಾಗಿ ಹಾಕಲ್ಪಡದೆ ಅಲಕ್ಷಿಸಲ್ಪಟ್ಟಿತು. ನಮ್ಮ ದೇಶದ ಅಭಿವೃದ್ಧಿ ಕಾರ್ಯಗಳಿಗೆ ಯಾವ ಗಮನವೂ ಸಿಕ್ಕಿಲ್ಲ. ಎಲ್ಲವೂ ಸಾಮ್ರಾಜ್ಯ ರಚನೆಗೆ ಬೇಕಾದ ಕಾರ್ಯಗಳಿಗೆ ಸಿಕ್ಕ ಸಿಕ್ಕ ಆದಾಯದ ಆಶ್ರಯಗಳೆಲ್ಲವೂ ಶೋಧಿಸಲ್ಪಟ್ಟು—ಇದ್ದುದು ಬಿದ್ದುದನ್ನೆಲ್ಲಾ ಹೀರಿಕೊಂಡು ಬಿಟ್ಟಿದೆ. ಮ್ಯಾಕ್ಡೊನಾಲ್ಡರು ಹೇಳಿದಂತೆ,[1] 'ನಾವು ಸಾಮ್ರಾಜ್ಯಶಾಹಿ ಕಾರ್ಯಗಳಿಗಾಗಿ ಹಿಂದೂದೇಶದ ಆದಾಯದಲ್ಲಿ ಬಹು ಭಾಗವನ್ನು ವೆಚ್ಚ ಮಾಡುತ್ತಿರುವೆವು; ಆದರೆ ಹಿಂದೂದೇಶದ ಅಭಿವೃದ್ಧಿಗೆ ಹಿಂದೂದೇಶದ ಆದಾಯದಲ್ಲಿ ಅತ್ಯಲ್ಪ ಭಾಗವನ್ನು ವೆಚ್ಚ ಮಾಡುತ್ತಿದ್ದೇವೆ.' ಅಧಿಕಾರಿ ವರ್ಗದ ಗದ್ದಲವೇ ಹೆಚ್ಚಾಗಿ, ಅವರ ಗದ್ದಲದಲ್ಲಿ ನರಳುತ್ತಿರುವ ಪ್ರಜಾಸಮುದಾಯದ ಹಾಹಾಕಾರವೇ ಕೇಳದಂತಾಗಿದೆ.

ಹಿಂದೂದೇಶದಲ್ಲಿ ಕಂದಾಯವನ್ನೇನೊ ವಸೂಲು ಮಾಡುವರು; ಆದರೆ ಅದರಲ್ಲಿ ಬಹುಭಾಗವು ಇಂಗ್ಲೆಂಡಿನಲ್ಲಿಯೇ ವೆಚ್ಚ ಮಾಡಲ್ಪಡುತ್ತಿದೆ. 'ಎಲ್ಲವನ್ನೂ[2] ಹೇಳಿ ಮಾಡಿದ ಮೇಲೆ, ಲಾಭನಷ್ಟಗಳ, ಕಷ್ಟಸುಖಗಳ

೧ ರಾಂಸೆ ಮ್ಯಾಕ್ಡೊನಾಲ್ಡರ 'ಭಾರತವು ಜಾಗ್ರತಗೊಳ್ಳಲಿ' ಪುಟ ೧೪೬

೨ ರಾಂಸೆ ಮ್ಯಾಕ್ಡೊನಾಲ್ಡರ 'ಹಿಂದೂದೇಶದ ಆಡಳಿತ' ಪುಟ ೧೪೯

ಪಟ್ಟಿಯನ್ನು ತಯಾರಿಸಿದಾಗ, ತನ್ನ ದೇಶದಲ್ಲಿ ಉತ್ಪತ್ತಿಯಾದ ಸಂಪತ್ತೆಲ್ಲವೂ ತನ್ನ ಸುಖಕ್ಕೇನೂ ಇಲ್ಲದೆ ಇತರರಿಗಾಗಿ ವೆಚ್ಚವಾಗಿ, ಪರದೇಶಗಳನ್ನು ಫಲವಂತವಾಗಿ ಮಾಡುತ್ತಿರುವುದರಿಂದ ಹಿಂದೂದೇಶವು ವಿಶೇಷವಾಗಿ ತೊಂದರೆಗೊಳಗಾಗಿರುವುದೆಂದು ನಿಸ್ಸಂದೇಹವಾಗಿ ನಾನು ನಂಬಬೇಕಾಗಿದೆ' ಎಂದು ಮ್ಯಾಕ್ಡೊನಾಲ್ಡರು ಹೇಳಿರುವರು.

ಬಡವರಿಂದ ತೆರಿಗೆಗಳು ಬೊಕ್ಕಸಕ್ಕೆ ಬಂದು ಬೀಳುತ್ತಿದ್ದರೂ, ಅವು ವಿದೇಶೀಯ ಸಾರ್ವಭೌಮರ ಮಾನಮರ್ಯಾದೆಗಳನ್ನು ಕಾಪಾಡುವುದಕ್ಕೆ ವಿನಿಯೋಗಿಸಲ್ಪಡುತ್ತಿವೆ. ಅದೇ ಕಾರ್ಮಿಕ ಪ್ರಮುಖನು ಹೇಳಿದುದನ್ನೇ ಮತ್ತೆ ಉದಹರಿಸೋಣ: ೧ 'ಹಿಂದೂದೇಶದ ಆದಾಯವೆಲ್ಲವೂ ಬಹಳ ಮಟ್ಟಿಗೆ ಬಡವರಿಂದಲೇ ಸಂದಾಯವಾಗುತ್ತಿದೆ. ಆದರೆ ಶ್ರೀಮಂತರು ಮಾತ್ರ ಬಹಳ ಸ್ವಲ್ಪವಾಗಿ ತೆರಿಗೆಗಳನ್ನು ಕೊಡುತ್ತಿರುವರು.' ಸರ್ ಎ. ಕಾಲಿನರು ೨ 'ರಾಜ್ಯಾದಾಯದ ಹೊರೆಯನ್ನು ಹೊತ್ತಿರುವ ಭಾರತೀಯ ಸಾರ್ವಜನಿಕರಿಂದ—ಬಡವರಿಗೂ ಸಿರಿವಂತರಿಗೂ ಅವರವರ ಯೋಗ್ಯತಾನುಸಾರವಾಗಿ— ಅದರ ಬಿಡುಗಡೆಯಾಗಬೇಕಾಗಿದೆ. . . .ಅದು ನಮ್ಮ ಹಿಂದೂದೇಶದ ರಾಜ್ಯಾಡಳಿತ ವಿಧಾನದಲ್ಲಿ ಅತ್ಯಂತ ಮಹತ್ವದ ಕರ್ತವ್ಯಲೋಪವಾಗಿದೆ. ಆದುದರಿಂದ ಅದನ್ನು ಕೂಡಲೆ ತೆಗೆದು ಹಾಕಬೇಕಾದ ಆವಶ್ಯಕತೆಯಿದೆ.' ದೇಹ ಪೋಷಣೆಯನ್ನೇ ನಿರ್ಲಕ್ಷ್ಯ ಮಾಡಿ ಶೇಖರಿಸಿದ ಬಡವನ ಒಂದು ರೂಪಾಯಿಯು ಶ್ರೀಮಂತನು ತನ್ನ ಸುಖಭೋಗವಿಲಾಸಗಳನ್ನು ಅನುಭವಿಸುವುದಕ್ಕಾಗಿ ಉಪಯೋಗವಾಗುತ್ತಿದೆ. ಇದರ ಪರಿಣಾಮವಾಗಿ ತೆರಿಗೆಗಳಿಂದ ಸಿಗಬೇಕಾದ ಅಲ್ಪ ಉಪಯುಕ್ತತೆಯೂ ನಷ್ಟವಾಗುತ್ತಿರುವುದು. ಅಂದರೆ ರಾಜ್ಯಾದಾಯದಿಂದಲೇ ಆಗಬೇಕಾದ ಆ ಉಪಯುಕ್ತತೆಯಲ್ಲಿ ನಷ್ಟವೇ ಆಗುತ್ತಿರುವುದು. ಸರ್ ವಿಲಿಯಂ ಹಂಟರನು ಜಮೀನು ಕಂದಾಯವನ್ನು ಕುರಿತು ಬರೆಯುತ್ತಾ ಹೀಗೆ ಒಪ್ಪಿಕೊಂಡಿರುವನು.೩

---

೧ ರಾಂಸೆ ಮ್ಯಾಕ್ಡೊನಾಲ್ಡರ 'ಹಿಂದೂದೇಶದ ಆಡಳಿತ' ಪುಟ ೧೨೮

೨ ಪಿ. ಜಿ. ಕಾಳೆಯವರ 'ಹಿಂದೂದೇಶದ ಅರ್ಥಶಾಸ್ತ್ರ' ಪುಟ ೯೫೧

೩ ಲಾಲಾ ಲಜಪತರಾಯರ 'ಸುಖವಿಲ್ಲದ ಭಾರತ' ಪುಟ ೩೫೬

'ಪ್ರಭುತ್ವವು ವಿಧಿಸಿರುವ ಕಂದಾಯ ವಿಧಾನವು ರೈತನಿಗೆ ತನ್ನ ಮತ್ತು ತನ್ನ ಕುಟುಂಬವನ್ನು ಪೋಷಿಸುವುದಕ್ಕೂ ಹೊಟ್ಟೆ ಹೊರೆದುಕೊಳ್ಳಲು ಸಾಕಷ್ಟನ್ನೂ ಕೂಡಾ ಬಿಡುವಂತಿಲ್ಲ.'

ಪ್ರಭುತ್ವವು ಬಡವರ ಮೇಲೆ ಹೆಚ್ಚಾಗಿ ಏಕೆ ಹೀಗೆ ತೆರಿಗೆಯನ್ನು ವಿಧಿಸಿದೆ? ಎಂದು ಯಾರಾದರೂ ಕೇಳಬಹುದು: ಸುಖದಿಂದಿರುವ ಶ್ರೀಮಂತರ ಮೇಲೆ ಅದೇ ಪ್ರಮಾಣದಲ್ಲಿ ಸುಂಕ ಸಾರಿಗೆಗಳನ್ನು ಹಾಕದೆ ಸ್ವಲ್ಪವಾಗಿ ಯಾತಕ್ಕಾಗಿ ವಿಧಿಸಿದೆ? ಪ್ರಭುತ್ವವು ಆಂಗ್ಲೇಯರಲ್ಲಿ ತೋರಿಸುತ್ತಿರುವ ಪ್ರೀತ್ಯಾದರಗಳಿಂದ ಹೀಗೆ ಮಾಡಲ್ಪಟ್ಟಿರುವುದೆಂದು ಊಹಿಸಲ್ಪಟ್ಟಿದೆ. ಹಿಂದೂದೇಶದಲ್ಲಿರುವ ಆಂಗ್ಲೇಯರೆಲ್ಲರೂ ಯಾವ ವ್ಯತ್ಯಾಸವೂ ಇಲ್ಲದೆ ಒಂದೇ ವರ್ಗಕ್ಕೆ ಸೇರಿದವರಾಗಿರುವರು. ಈ ಪ್ರಶ್ನೆಗೆ ಮತ್ತೊಂದು ಉತ್ತರವೂ ಇರುವುದು. ಹಿಂದೂದೇಶದ ಪರಿಸ್ಥಿತಿಯನ್ನು ಹಿಡಿದು ಈ ವಿಧವಾಗಿ ಪ್ರಭುತ್ವವು ವ್ಯವಸ್ಥೆಯಿಂದ ಆಡಳಿತವನ್ನು ನಡೆಯಿಸದಿದ್ದರೆ ಸ್ಥಿತಿಗತಿಗಳೇ ಬೇರೆಯ ರೂಪವನ್ನು ತಾಳಿ ಮಹದಾಶ್ಚರ್ಯವನ್ನುಂಟು ಮಾಡುತ್ತಿದ್ದುವೆಂದು ಹೇಳುವ ಉತ್ತರವೂ ಸರಿಯಾಗಿಯೇ ಕಾಣುವುದು. ಈ ಕಾರಣವು ರಾಜಕೀಯವಾದುದು. ಹಿಂದೂದೇಶವನ್ನು ಆಳುತ್ತಿರುವ ಆಂಗ್ಲೇಯ ಪ್ರಭುತ್ವವು ವಿದೇಶೀಯ ಪ್ರಭುತ್ವವು. ಆದುದರಿಂದ ಹಿಂದೂದೇಶದ ಪ್ರಜಾವರ್ಗವನ್ನು ಹೀರಲು ಅದು ಅಲ್ಲಿ ಬೇರುಗಳನ್ನು ಬಿಟ್ಟುಕೊಂಡಿಲ್ಲ. ಅದಕ್ಕಾಗಿ ಇಲ್ಲಿನ ಪ್ರಜೆಗಳಲ್ಲಿ ಕೆಲವರ ಸಹಾಯ ಸಹಾನುಭೂತಿಗಳು ಅದಕ್ಕೆ ಅಗತ್ಯವಿದೆ. ಯಾರ ರಾಜಭಕ್ತಿಯು ತಮ್ಮ ಪ್ರಜಾವಾತ್ಸಲ್ಯತೆಗೆ ಬೆಲೆ ಬರುವಂತೆ ಮಾಡಬಲ್ಲುದೋ ಅದರಲ್ಲಿಯೂ ತಮ್ಮ ಅಧಿಕಾರಿಗಳ ಆಳ್ವಿಕೆಯಲ್ಲಿ, ಯಾರ ಶಕ್ತಿ ಸಾಮರ್ಥ್ಯಗಳು ತಮಗೆ ಸಹಾಯಕಾರಿಯಾಗಿರಬಲ್ಲುವೋ, ಅಂತಹ ವಿದ್ಯಾವಂತರಾದ ಉತ್ತಮ ದರ್ಜೆಯವರಾದ, ಆರ್ಥಿಕ ಜೀವನದ ಮಟ್ಟದಲ್ಲಿ ಸುಖದಿಂದಿರುವ ಶ್ರೀಮಂತ ವರ್ಗದವರನ್ನು ಈ ತೆರಿಗೆಯ ವಿಧಾನವು ಶಾಂತಿ ಸಮಾಧಾನದಿಂದಿರಿಸಿರುವುದು. ಆಂಗ್ಲೇಯರಿಗೆ ಪ್ರಭುತ್ವವು ತೋರಿಸುತ್ತಿರುವ ಆದರ ಔದಾರ್ಯಗಳ ಜೊತೆಯಲ್ಲಿ ಇವರಿಗೆ ತೋರಿಸುತ್ತಿರುವ ಆದರ ಔದಾರ್ಯಗಳೂ ಏಕೀಭೂತವಾಗಿ ಹೋಗಿವೆ. ಈ ಗುಂಪಿಗೆ ಅನನುಕೂಲವಾದ ಯಾವುದೇ ಪ್ರಭುತ್ವದ ಕಾರ್ಯಾ

ಚರಣೆಯಿದ್ದರೆ, ಅದನ್ನು ಇವರು ವಿರೋಧಿಸಿದಲ್ಲಿ, ಕೂಡಲೆ ಅದನ್ನು ಪ್ರಭುತ್ವವು ಸರಿಪಡಿಸಿಕೊಡುವುದು.

ಪರದೇಶದ ಆಡಳಿತವಿರುವುದರಿಂದ ಸ್ಥಿತಿಸನ್ನಿವೇಶಗಳು ಹಾಗೆ ಏರ್ಪಟ್ಟು ಪ್ರಭುತ್ವದ ವೆಚ್ಚವೇ ಏರಿದೆ. ಅದೇ ದೇಶೀಯ ಸರಕಾರವಿದ್ದರೆ ಎಂದಿಗೂ ಹಾಗಿರುತ್ತಿರಲಿಲ್ಲ. ಪರದೇಶದ ಪ್ರಭುತ್ವವು ಯುದ್ಧಕಾಲದಲ್ಲಿಯೂ ದ್ರವ್ಯಾಪೇಕ್ಷೆಯೇ ಮುಖ್ಯ ಧ್ಯೇಯವಾಗಿರುವ ಸೈನ್ಯದ ಮೇಲೆ ಆಧಾರ ಪಟ್ಟಿರಬೇಕಾಗಿರುವುದು. ರಾಷ್ಟ್ರೀಯ ಪ್ರಭುತ್ವವು ಮಾತ್ರ ಈ ವೆಚ್ಚವನ್ನು ಕಡಿಮೆ ಮಾಡಿ, ಸರಿಯಾದ ಸಣ್ಣ ಸೈನ್ಯವನ್ನು ಮಾತ್ರ ಯಾವಾಗಲೂ ಕಾಯ್ದಿಟ್ಟುಕೊಂಡು, ಅಗತ್ಯ ಅವಸರ ಸಮಯಗಳಲ್ಲಿ ದೇಶದ ಮೇಲೆ ಅವಲಂಬಿಸಿರುವುದು.

ಇನ್ನು ರೈಲ್ವೆಯ ಆಡಳಿತ ವಿಧಾನದ ನೀತಿಯನ್ನು ಸಮರ್ಥಿಸುವ ವಾದಸರಣಿಯನ್ನು ಪರಿಶೀಲಿಸಿದಾಗ, ಕ್ಷಾಮಡಾಮರಾದಿಗಳ ಬಾಧೆಯನ್ನು ನಿವಾರಣೆಮಾಡುವುದಕ್ಕಾಗಿ ಎಂದು ಹೇಳುವುದು. ಸಮುದ್ರದಲ್ಲಿ ಪ್ರಚಂಡ ಚಂಡಮಾರುತವು ಎದ್ದಾಗ ನಾವಿಕರಿಗೆ ಸಹಾಯ ಮಾಡುವ ಸೇವೆಯನ್ನು ಸಲ್ಲಿಸಬಲ್ಲುದೆಂದು ಮಹತ್ತರ ನೌಕಾಪಡೆಯನ್ನು ಏರ್ಪಡಿಸಿ, ಅದನ್ನು ಏರ್ಪಡಿಸಿದ ನೀತಿಯನ್ನು ಪ್ರಭುತ್ವವು ಸಮರ್ಥಿಸುವಂತಿರುವುದು. ಕ್ಷಾಮಗಳೇ ತಲೆದೋರದಂತೆ ಮಾಡುವ ನಿವಾರಣೋಪಾಯಗಳನ್ನು ದುರ್ಲಕ್ಷಿಸಿದಾಗ, ಪ್ರಜೆಗಳೆ ವೈಯಕ್ತಿಕವಾಗಿ ಸ್ಥಾಪಿಸಿಕೊಂಡ ಕೆರೆಕಟ್ಟೆಗಳನ್ನೂ ಭಾವಿ ಕೊಳಗಳನ್ನೂ ಮುಚ್ಚಿದಾಗ, ನೀರಾವರಿ ಜಲಾಧಾರಕ್ಕೆ ಸ್ವಾತಂತ್ರ್ಯವಿಲ್ಲದೆ ಪ್ರಭುತ್ವದ ಹತೋಟಿಯಲ್ಲಿದ್ದು ನೀರು ವ್ಯವಸಾಯಕ್ಕೆ ಉಳಿಸಲು ತೆರಿಗೆಯು ವಿಧಾಯಕವಾದಾಗ, ಒಹುಮಟ್ಟಿಗೆ ವಿಜ್ಞಾನದ ಜ್ಞಾನಾನುಭವಗಳಿಲ್ಲದೆ ಇರುವುದರಿಂದ ಜನರ ವ್ಯವಸಾಯದ ಮಟ್ಟವೇ ಕೀಳು ದರ್ಜೆಯದಾಗಿರುವಾಗ, ಪ್ರಭುತ್ವವು ತೆರಿಗೆ ತೆಗೆದುಕೊಂಡು ಒದಗಿಸಿಕೊಡುವ ನೀರಿನ ಸರಬರಾಯಿಯು ಸರಿಯಾಗಿ ಶೋಧಿಸಿ ಪರಿಶೀಲನೆಯಾಗದಿರುವುದರಿಂದ ವ್ಯವಸಾಯಕ್ಕೆ ಅಪಾಯಕರವಾದ ವಸ್ತುಸಾಮಗ್ರಿಗಳನ್ನೊಳಗೊಂಡು ಬೆಳೆಗೆ ಅನುಕೂಲವಾಗದಿರುವಾಗ ಈ ತರ್ಕ ವಾದಗಳಾವವೂ ನ್ಯಾಯವಾಗಿರುವುದಿಲ್ಲ. ಮಾರ್ಗ ಸೌಕರ್ಯಗಳನ್ನು ಕಲ್ಪಿಸಿಕೊಟ್ಟಿರುವ

ಸಾಧನವೆಂಬುದಾಗಿದೆಯೋ ಎಂದು ವಿಮರ್ಶಿಸಿ ಸರ್ ಎ. ಕಾರ್ಟರವರು ಹೀಗೆ ಹೇಳಿರುವರು: [೧] 'ನನ್ನ ಮಹತ್ವದ ವಾದವೆಂದರೆ, ಹಿಂದೂದೇಶವು ನೀರಾವರಿಯ ಮಾರ್ಗ ಸೌಕರ್ಯವನ್ನು ಅತ್ಯಗತ್ಯವಾಗಿ ಪಡೆಯಬೇಕಾಗಿದೆ; ಯಾವ ದರಕ್ಕೆ ಸಾಮಾನಿನ ಸರಬರಾಯಿಯನ್ನು ಮಾಡಬೇಕೋ. ಅದನ್ನು ರೇಲ್ವೆಯು ಕೊಡಲಾರದೆ ಆ ಪ್ರಜಾ ಲಾಭದಾಯಕ ದರಕ್ಕೆ ಸಾಮಗ್ರಿಗಳನ್ನು ಸರಬರಾಯಿ ಮಾಡಲಾರದೆ ಅನುಪಯುಕ್ತವಾಗಿದೆ.....ಹವೆಯ ಡೋಣಿಗಳು ಓಡಾಡಬಲ್ಲ ಕಾಲುವೆಗಳಿದ್ದಲ್ಲಿ ರೈಲ್ವೆಗಳಿಂದಾಗುತ್ತಿರುವ ಸರಬರಾಯಿ ವೆಚ್ಚದಲ್ಲಿ ಎಂಟನೆಯೊಂದು ಭಾಗವೂ ವೆಚ್ಚವಾಗುತ್ತಿರಲಿಲ್ಲ. ಅವು ಎಷ್ಟು ಹೊರೆಯನ್ನಾದರೂ ಯಾವ ವೇಗದಲ್ಲಾದರೂ ತೆಗೆದುಕೊಂಡು ಹೋಗುತ್ತಿದ್ದವು '

'ಹಿಂದೂದೇಶದ ಸಹಿಸಲಾರದ ದಾರಿದ್ರ್ಯವು ಮುಖ್ಯವಾಗಿ ದೇಶವು ಉತ್ಪತ್ತಿಯ ದೃಷ್ಟಿಯಿಂದ ವ್ಯವಸ್ಥಿತವಾಗಿಲ್ಲವೆಂಬುದು ಸತ್ಯಾಂಶವಾಗಿದೆ' ಎಂದು ರಷ್‌ಬ್ರುಕ್ ವಿಲಿಯಂರವರು [೨] ಪರಿಸ್ಥಿತಿಯಲ್ಲಿರುವ ಲೋಪದ ಮೇಲೆ ಸರಿಯಾಗಿ ತಮ್ಮ ಕೈಯಿಟ್ಟು ತೋರಿಸಿರುವರು. ಜೆ. ಎ. ಹಾಬ್ಸನ್‌ರವರು ಏಕೆ ಹಿಂದೂದೇಶವು ಈ ವಿಧವಾಗಿ ವ್ಯವಸ್ಥೆ ಮಾಡಲ್ಪಟ್ಟಿಲ್ಲವೆಂಬುದಕ್ಕೆ ಸಾಮಾನ್ಯ ಕಾರಣಗಳನ್ನು [೩] ನಿರೂಪಿಸುತ್ತ ಹೀಗೆ ಹೇಳಿರುವರು: 'ನಾಗರಿಕ ಪಾಶ್ಚಾತ್ಯ ಪ್ರಪಂಚವು ತನ್ನ ರಾಜಕೀಯ ಆರ್ಥಿಕ ಭಾವಗಳನ್ನೂ ನೀತಿಗಳನ್ನೂ ಬಹಳ ವಿವೇಚನೆಯಿಂದ ತನಗಿಂತಲೂ ಕೀಳು ದರ್ಜೆಯಲ್ಲಿರುವ ಹಿಂದುಳಿದ ಜನಾಂಗದ ಸುಲಿಗೆಯ ಆಧಾರದ ಮೇಲೆ ರೂಪುಗೊಳಿಸುತ್ತಿದೆ. ಜನಾಂಗದ ಶ್ರೇಷ್ಠತ್ವವನ್ನು ಸಾಮ್ರಾಜ್ಯಶಾಹಿತ್ವವು ಸ್ಥಾನಪಲ್ಲಟಮಾಡುತ್ತ ಅದನ್ನು ಹಿಂದೆ ಹಾಕಿ ದಾಟಿಕೊಂಡು ತನ್ನ ಶ್ರೇಷ್ಠತ್ವವನ್ನೂ ಸ್ಥಾಪಿಸಿಕೊಳ್ಳುತ್ತಿದೆ. ಸಾಮ್ರಾಜ್ಯಶಾಹಿತ್ವವು ಈಗಿನ ಆಧುನಿಕ ಸಾಮಾಜಿಕ ಒಡಕುತೊಡಕುಗಳಿಗೆ ತಕ್ಕಂತೆ ನೀತಿ ವಿವೇಕಗಳನ್ನು ನಿರೂ

---

೧ ಕೆ. ಟಿ. ಷಾರವರ 'ವ್ಯಾಪಾರ, ತೆರಿಗೆ, ಮಾರ್ಗಸೌಕರ್ಯಗಳು' ಪುಟ ೪೦೯

೨ ರಷ್‌ಬ್ರುಕ್‌ವಿಲಿಯಂರವರ '೧೯೨೩-೨೪ರಲ್ಲಿ ಹಿಂದೂದೇಶದ ಪರಿಸ್ಥಿತಿ' ಪುಟ ೧೯೪

೩ ಜೆ. ಎ. ಹಾಬ್ಸನವರ 'ಕೆಲಸ ಮತ್ತು ಸಂಪತ್ತು' ಪುಟ ೧೨೬

ಪಿಸುತ್ತದೆ. ಅದು ಅನತಿದೂರದಲ್ಲಿರುವ ಕಾಣಬರುತ್ತಿರುವ ಯುಗದ ಕಡೆಗೆ ಸರಿಯುತ್ತಿದೆ. ಆಗ ಪಾಶ್ಚಾತ್ಯ ಶ್ವೇತಜನಾಂಗಗಳು, ತಮ್ಮ ಜೀವನ ವನ್ನು ಹೊರೆದುಕೊಳ್ಳುವುದಕ್ಕಾಗಿ ಪ್ರಪಂಚದ ನಾನಾ ದೂರ ಪ್ರದೇಶಗಳಲ್ಲಿ ಇರುವ ಒಡಜನರ ಕಷ್ಟದ ಮೇಲೆಯೇ ಮುಖ್ಯವಾಗಿ ಆಧಾರಪಡಬಹುದು. ಒಲಿಷ್ಠರಾದವರೆಲ್ಲರೂ ಅಥವಾ ಅವರಲ್ಲಿ ಮುಖ್ಯರಾದವರು ಸುಖಶಾಂತಿ ಸಮಾಧಾನಗಳಿಂದ ಪ್ರಪಂಚವನ್ನೇ ಆಳುವವರಂತೆ ವ್ಯಕ್ತಿಶ್ರೇಷ್ಠತ್ವದ ಸಾಮೂಹಿಕ ಭಾವನೆಯಿಂದ ತಮ್ಮ ಜೀವನವನ್ನು ಸಂತೋಷದಿಂದ ನಡೆ ಸುತ್ತಿರುವರು.' ಇದೇ ಅಭಿಪ್ರಾಯವನ್ನೇ ಡಾಕ್ಟರ್ ರೂಥರ್ ಫೋರ್ಡ್ದರು ವಿಶದೀಕರಿಸಿರುವರು. ಆತನು ಹಿಂದೂದೇಶದಲ್ಲಿ ನಡೆಯಿಸುತ್ತಿರುವ ಆಂಗ್ಲೇಯ ಪ್ರಭುತ್ವವನ್ನು ಕಳಂಕಯುತವಾದುದಾಗಿ ವರ್ಣಿಸಿರುವನು. 'ಪ್ರಪಂಚದಲ್ಲಿ ಒಂದು ದೇಶವು ಮತ್ತೊಂದು ದೇಶವನ್ನು ಸುಲಿಗೆಮಾಡು ವಂತಹ ಪ್ರಭುತ್ವಪ್ರಧಾನವು ಬಹಳ ಕೀಳುತರಹದ್ದೂ[೧] ಅತ್ಯಂತ ಅನೈತಿಕ ವಾದುದು.' ಆತನು ಹಿಂದೂದೇಶದ ದಾರಿದ್ರ್ಯದ ಮುಖ್ಯ ಕಾರಣಗಳನ್ನು ವಿವರಿಸುತ್ತ, ಅದರಲ್ಲಿಯೂ ಪ್ರಭುತ್ವದ ಆದಾಯವೆಚ್ಚಗಳನ್ನು ವಿಮರ್ಶೆ ಮಾಡಿ ಪ್ರಜಾಕೋಟಿಯನ್ನು ವಿದ್ಯಾವಂತರನ್ನಾಗಿ ಮಾಡಲು ತೋರಿಸುವ ಅಲಕ್ಷ್ಯವೂ,[೨] ಗ್ರಾಮಾಂತರಗಳಲ್ಲಿ ಆರೋಗ್ಯ ನೈರ್ಮಲ್ಯದ ಪರಿಗಣನೆಯೇ ಇಲ್ಲದೆ ಅದರಲ್ಲಿ ತೋರಿಸಿರುವ ಅನಾದರವೂ, ಶಾಂತಿಸಮಾಧಾನಗಳನ್ನು ಕಾಪಾಡಿಕೊಡುವುದರಲ್ಲಿ ತೋರಿಸಿರುವ ನಿರ್ಲಕ್ಷ್ಯವೂ, ಬಡಬಗ್ಗರಿಗೆ ಮನೆ ವಸತಿಯನ್ನು ಏರ್ಪಡಿಸಿಕೊಡುವುದರಲ್ಲಿ ತೋರಿಸಿರುವ ಅನಾದರಣೆಯೂ, ರೈತ ರನ್ನು ಸಾಹುಕಾರರ ಬಲೆಯಿಂದ ಬಿಡುಗಡೆ ಮಾಡುವುದರಲ್ಲಿ ತೋರಿಸಿರುವ ಅಶ್ರದ್ಧೆಯೂ, ವ್ಯವಸಾಯದಾರರ ಲೇವಾದೇವಿಗೆ ಅನುಕೂಲವಾದ ನಿಧಿ ಗಳನ್ನು (ಬೇಂಕು) ಏರ್ಪಡಿಸಿಕೊಡುವುದರಲ್ಲಿ ತೋರಿಸಿರುವ ಅಸಹಕಾರ ಭಾವವೂ; ವ್ಯವಸಾಯವನ್ನು ಉತ್ತಮಗೊಳಿಸಿ ಅಭಿವೃದ್ಧಿಗೆ ತರುವುದರಲ್ಲಿ ತೋರಿಸಿರುವ ಅನಾದರವೂ, ದೇಶೀಯ ವೃತ್ತಿಗಳಿಗೆ ಉತ್ತೇಜನ ಕೊಡುವು ದರಲ್ಲಿ ತೋರಿಸಿರುವ ಅಸಹಕಾರವೂ, ಟ್ರಾಮು ಮಾರ್ಗಗಳು, ವಿದ್ಯು

---

೧ ವಿ. ಹೆಚ್. ರೂಥರ್ ಫೋರ್ಡ್ 'ಆಧುನಿಕ ಭಾರತ' ಪುಟ ೭೭

೨ „ „ ಪುಟ ೧೬೧

ದ್ವೀಪದ ಯೋಜನೆಗಳು ಇನ್ನೂ ಇತರ ಸಾರ್ವಜನಿಕ ವೃತ್ತಿಕೇಂದ್ರಗಳನ್ನು ಆಂಗ್ಲೇಯ ಸಾಹುಕಾರರು ಆಕ್ರಮಿಸಿಕೊಳ್ಳದಂತೆ ತೋರಿಸಬೇಕಾದ ಮನೋಭಾವನೆಯೂ, ಲಂಡನ್ನಿನ ಹಿತಚಿಂತನೆಯ ದೃಷ್ಟಿಯಿಂದ ಹಿಂದೂ ದೇಶದ ನೋಟು ನಾಣ್ಯಚಲಾವಣೆಯಲ್ಲಿ ನಡೆಯುತ್ತಿರುವ ಚಾತುರ್ಯವನ್ನು ತಡೆಯದಿರುವುದರಲ್ಲಿ ತೋರಿಸಿರುವ ನೀತಿಯೂ ಮುಖ್ಯ ಕಾರಣ'ಗಳೆಂದು ಹೇಳಿರುವನು.

ರಕ್ಷಣಾತೆರಿಗೆಗಳು ಪುರಾತನ ಗ್ರಾಮೋದ್ಯೋಗಗಳನ್ನು ವೃತ್ತ್ಯುಪ-ವೃತ್ತಿಗನ್ನು ನಾಶವಾಗಿಹೋಗದಂತೆ ಅಡ್ಡಿಮಾಡಿರುವನೆಂದು ಭಾವಿಸಿದರೆ, ಅದು ಯಾಂತ್ರಿಕ ಉತ್ಪತ್ತಿಗೆ ಅವಕಾಶಕೊಟ್ಟು ನೂತನ ರೀತಿಯಲ್ಲಿ ವೃತ್ತಿ ಜೀವನಕ್ಕೆ ಮಾರ್ಗತೋರಿಸಿ, ಹಳ್ಳಿಗಳಲ್ಲಿ ಹೆಚ್ಚಾಗಿದ್ದ ಜನರನ್ನು ಪಟ್ಟಣ ಗಳಿಗೆ ಬರುವಂತೆ ಸೆಳೆಯುತ್ತ, ಕಷ್ಟಕ್ಕೆ ತಕ್ಕಂತೆ ವ್ಯವಸಾಯದ ಉತ್ಪತ್ತಿ ಯನ್ನು ಹೆಚ್ಚಿಸುತ್ತಿದ್ದಿತು. ಧನಿಕವಾದದಲ್ಲಿರುವ ತೊಂದರೆಗಳನ್ನು ನಿವಾ ರಣೆ ಮಾಡಲು ಉತ್ಪತ್ತಿಕಾರರ ಸಹಕಾರ ಪಡೆದು, ಉತ್ಪತ್ತಿಯಲ್ಲಿ ಅಭಿವೃದ್ಧಿ ಯನ್ನು ಪಡೆದಿದ್ದರೆ, ಪ್ರಜಾಕೋಟಿ ದಾರಿದ್ರ್ಯಕ್ಕೆ ಎಷ್ಟೋ ಸಹಾಯಕಾರಿ ಯಾಗುತ್ತಿತ್ತು. 'ವಸ್ತುನಿರ್ಮಾಣಕರು[೩] ನಿಸ್ಸಹಾಯರಾದರೆ, ರೈತರ ಮೇಲೆ ಮಿತಿಮೀರಿದ ತೆರಿಗೆಗಳನ್ನು ಹೇರಿದರೆ, ದೇಶದಲ್ಲಿ ಉತ್ಪತ್ತಿಯಾಗುವ ಆದಾಯದಲ್ಲಿ ಮೂರನೆಯೊಂದು ಭಾಗವನ್ನು ಸುಮ್ಮನೆ ಬಿಟ್ಟುಬಿಟ್ಟರೆ, ಪ್ರಪಂಚದ ಯಾವ ದೇಶವೇ ಆಗಲಿ ಶಾಶ್ವತ ದಾರಿದ್ರ್ಯದಿಂದಲೂ ಎಡೆಬಿಡದೆ ಬರುವ ಕ್ಷಾಮಡಾಮರಗಳಿಂದಲೂ ಬಾಧೆಪಡುವುದು ಸತ್ಯ. ಯೂರೋಪು ಖಂಡದಲ್ಲಿರುವಂತೆಯೇ ಏಷ್ಯಾಖಂಡದಲ್ಲಿಯೂ ಆರ್ಥಿಕ ನ್ಯಾಯಗಳೆಲ್ಲವೂ ಒಂದೇ ಆಗಿವೆ. ಹಿಂದೂದೇಶವು ಇಂದು ದಾರಿದ್ರ್ಯವನ್ನನುಭವಿಸುತ್ತಿದ್ದರೆ, ಅದು ಆರ್ಥಿಕ ಕಾರಣಗಳ ಆಚರಣೆಯಿಂದಲೇ. ಹೀಗಿದ್ದೂ ಈ ಪರಿಸ್ಥಿತಿಯಲ್ಲಿ ಹಿಂದೂದೇಶವು ಸಂಪತ್‌ಸಮೃದ್ಧಿವಂತವಾಗಿದ್ದರೆ ಅದು ದೈವಿಕವಾದುದೇ.' ಹಿಂದೂದೇಶವು ಇನ್ನೂ ಜೀವಂತವಾಗಿರುವುದು ತೀರ ಆಶ್ಚರ್ಯಕರವಾದು ದಾಗಿದೆ. ಆದರ ಆರ್ಥಿಕ ದೈವಿಕ ಶಕ್ತಿಯೆಂದರೆ ಈಗ ಹತ್ತಾರು ವರ್ಷಗಳಿಂ ದಲೂ ಹಿಂದೂದೇಶವು ಕಲ್ಲನ್ನು ರೊಟ್ಟಿಯಾಗಿ ಮಾಡಿಕೊಳ್ಳುತ್ತಿದೆ. ಮತ್ತೆ

---

೩ ರಮೇಶಚಂದ್ರದತ್ತರ 'ಹಿಂದೂದೇಶದ ಆರ್ಥಿಕ ಇತಿಹಾಸ' ಪುಟ XVI

ಯಾವುದಾದರೂ ದೇಶವಾಗಿದ್ದರೆ ಇಂತಹ ಪರಿಸ್ಥಿತಿಗಳಲ್ಲಿ ಈ ಬಾಧೆಯನ್ನು ಎಂದೋ ನಿರಾಶೆಯಿಂದ ನೀಗಿಕೊಳ್ಳುತ್ತಿತ್ತು. ರಾಮ್ಸೆಮಾಕ್ಡೊನಾಲ್ಡರೇ ತಾವೇತಾವಾಗಿ ಇದನ್ನು ಒಪ್ಪಿಕೊಂಡಿರುವರು:[೧] 'ಒಟ್ಟಿನ ಮೇಲೆ ನಮ್ಮ ಮೇಲೆ ಎರಡು ಆರೋಪಗಳನ್ನು ಸಮರ್ಥಿಸಬಹುದಾಗಿದೆಯೆಂದು ನಾನು ತಿಳಿಯುತ್ತೇನೆ. ಮೊದಲನೆಯದು ನಮ್ಮ ಪ್ರಭುತ್ವವು ಬಹಳ ದುಂದು ಮಾಡುತ್ತಿದೆಯೆಂದು; ಎರಡನೆಯದು ನಾವು ಹಿಂದೂದೇಶದೊಡನೆ ಬಹಳ ನೀಚ ಮನೋಭಾವನೆಯಿಂದ ವರ್ತಿಸಿದ್ದೇವೆಂದು.' ಪ್ರಭುತ್ವದ ವೆಚ್ಚವು ಪ್ರಜೆಗಳ ಸಂಪಾದನೆಯನ್ನು ಉತ್ತಮಗೊಳಿಸುವಂತಹವುದಾಗಿದ್ದರೆ, ಅದು ಅವರ ಶಕ್ತಿಸಾಮರ್ಥ್ಯಗಳನ್ನು ಹೆಚ್ಚಿಸುತ್ತದೆ; ಹಾಗಲ್ಲದೆ ಆ ಸಂಪಾದನೆಯನ್ನು ಕಡಿಮೆಮಾಡುವುದಾಗಿದ್ದರೆ, ಅದು ಪ್ರಜೆಗಳನ್ನು ಬಡವರನ್ನಾಗಿ ಮಾಡುತ್ತದೆ. ಅವರ ಉತ್ಪತ್ತಿಯ ಬಹು ಭಾಗವನ್ನು ಸ್ವಲ್ಪ ಪ್ರತಿಫಲಕ್ಕಾಗಿ ದೇಶದಿಂದ ಹೊರಕ್ಕೆ ಕಳುಹಿಸಿದ್ದೇ ಆದರೆ, ಆ ಪ್ರಮಾಣದಲ್ಲಿ ರಾಷ್ಟ್ರದ ಆದಾಯದ ಹಂಚಿಕೆಯಲ್ಲಿ ಕಡಿಮೆಯಾಗುವುದು. ಪ್ರತಿಸಾರಿಯೂ ಒಂದೇ ವಿಧಾನದ ಮೇಲೆ ಪ್ರಭುತ್ವದವರ ಮೇಲ್ವಿಚಾರಣೆಯಲ್ಲಿ ಪ್ರತಿಯೊಂದು ತಲೆಗೂ ವರುಷಕ್ಕೆ ಬರುವ ಸರಾಸರಿ ಸಂಪಾದನೆಯು ಈ ಕೆಳಗೆ ತೋರಿಸಿದಂತಿದೆ.

| | | | | |
|---|---|---|---|---|
| ಬೇರಿಂಗ್ ಬಾರ್ಬರರಿಂದ | ೧೮೮೧ರಲ್ಲಿ | ವರುಷಕ್ಕೆ ತಲೆ | ೨೭ರೂ. | ಆದಾಯ. |
| ಲಾರ್ಡ ಕರ್ಜನರಿಗಾಗಿ | ೧೯೦೧ರಲ್ಲಿ | ,, | ೩೦ | ,, |
| ಪ್ರೊಫೆಸರು ಷಾರವರಿಂದ | ೧೯೨೧ರಲ್ಲಿ | ,, | ೭೪ | ,, |

ಈ ಅಂಕೆಗಳನ್ನು ನೋಡಿದ ಕೂಡಲೆ ಅಭಿವೃದ್ಧಿಯಿದೆಯೆಂದು ಕಂಡು ಬರುತ್ತದೆ; ಆದರೆ ಪ್ರತಿಯೊಬ್ಬನ ಕೊಳ್ಳುವ ಸಾಮರ್ಥ್ಯಕ್ಕೆ ಸಪ್ರಮಾಣವಾಗಿ ಅದನ್ನು ಇಳಿಸದಿದ್ದಾಗ ಆ ಹಣದ ಬೆಲೆಗೆ ಏನೇನೂ ಅರ್ಥವಿಲ್ಲ. ಆಯಾ ವರುಷಗಳಲ್ಲಿದ್ದ[೨] ವಸ್ತುವಿಕ್ರಯ ದರದೊಡನೆ (೧೦೦,೧೨೦,೩೭೮) ಅದೇ ಪ್ರಮಾಣಕ್ಕೆ ಇವನ್ನು ರೂಪಾಂತರ ಮಾಡಿಕೊಂಡರೆ, ಆ ಮೂರು

---

೧. ಮಾಕ್ಡೊನಾಲ್ಡರ 'ಹಿಂದೂದೇಶವು ಜಾಗ್ರತಗೊಳ್ಳಲಿ' ಪುಟ ೧೪೮

೨ ಸಿ. ಯನ್. ವಕೀಲರು ಮತ್ತು ಮುರಂಜನರ 'ಹಿಂದೂದೇಶದಲ್ಲಿ ಹಣದ ಚಲಾವಣೆಯೂ, ಬೆಲೆಗಳೂ' ಪುಟ ೩೦೯

ವರುಷಕ್ಕೂ ಕ್ರಮವಾಗಿ ಜೀವನವುಟ್ಟವು ಇಳಿಯುತ್ತಿದ್ದರೆ ೨೭,೨೦,೩೭, ೧೯.೬ ರೂಪಾಯಿಗಳು ಬರುತ್ತಿವೆ. ' ಹಿಂದೂದೇಶದ ಪ್ರಜೆಗಳು ದಿನದಿನವೂ ಬಡವರು ಬಡವರಾಗಿ ಹೋಗುತ್ತಿರುವರು. ತೆರಿಗೆಗಳು ನಿಜವಾಗಿಯಿರಲಿ ಅವರ ಯೋಗ್ಯತೆಗೇ ಬಹಳ ಹೆಚ್ಚಾಗಿವೆ. ಎಡಬಿಡದೆ ಬಾಧಿಸುತ್ತಿರುವ ಅಭಾವವು ದಾರಿದ್ರ್ಯವನ್ನು ಮತ್ತಷ್ಟು ವಿಶಾಲಗೊಳಿಸಿ ಕ್ಷಾಮಗಳು ಮೇಲಿಂದಮೇಲೆ ಒಂದೊದಗುವಂತೆ ಮಾಡುತ್ತದೆ; ಅಲ್ಲಿನ ವ್ಯಾಪಾರವೆಲ್ಲವೂ ದಾರಿದ್ರ್ಯಸೂಚಕವಾಗಿ ಜನರನ್ನು ಸಂಕಸಾರಿಗೆಗಳಿಂದ ಕುಗ್ಗಿಸುತ್ತಿದೆ; ಅತ್ಯಂತ ವ್ಯವಸ್ಥೆಗೊಳಗಾದ ವಿದೇಶೀಯ ಪ್ರಭುತ್ವವೇ ದೇಶದ ಮೇಲೆ ಭಯಂಕರ ಸೂರೆಯ ಪ್ರವಾಹವಾಗಿದೆ; ಪ್ರಪಂಚದಲ್ಲಿರುವ ಎಲ್ಲಾ ರೈಲ್ವೆಯ, ನೀರಾವರಿಯ ಯೋಜನೆಗಳೂ ಹಿಂದೂದೇಶದಲ್ಲಿಯೇ ಕೇಂದ್ರೀ ಕೃತವಾದರೆ ಅವೆಲ್ಲವೂ ರೈತನ ಮೇಲೆಯೇ ಹೇರಲ್ಪಟ್ಟವಾದರೆ ಈ ಕಷ್ಟದ ತೊಂದರೆಯನ್ನು ತ್ವರಿತಗೊಳಿಸುತ್ತಿದ್ದುವು ' ಎಂಬುದಾಗಿ ಮಾತನಾಡು ತ್ತಿರುವುದನ್ನು ಹಿಂಡಮನ್ನನು ತಿಳಿದಿರುವನು.[೧]

ಪ್ರಜಾಸ್ವಾತಂತ್ರ್ಯದ ಸುಪ್ರಾತಿಸಿದ್ಧ ಸರಕಾರದಲ್ಲಿ, ಸಾಮಾನ್ಯವಾಗಿ ಪ್ರಭುತ್ವದ ವೆಚ್ಚವು ಕ್ರಮಕ್ರಮವಾಗಿ ಅಭಿವೃದ್ಧಿ ಹೊಂದುತ್ತಿದ್ದರೆ ಅದು ರಾಷ್ಟ್ರಾಭಿವೃದ್ಧಿಯ ಶುಭ ಸೂಚನೆಯೆಂದು ಪರಿಗಣಿಸಲ್ಪಟ್ಟಿದೆ. ಆದರೆ ಹಿಂದೂದೇಶದಲ್ಲಿ, ಆ ಪ್ರಭುತ್ವದ ವೆಚ್ಚದ ಅಭಿವೃದ್ಧಿಯು ಅಧಿಕಾರಿಗಳು ತಮಗೆ ಹೆಚ್ಚು ಹೆಚ್ಚಾಗಿ ಸಂಬಳಗಳನ್ನೂ ಭತ್ಯಗಳನ್ನೂ ಜೀವನದ ಬೆಲೆಯನ್ನೂ ಏರಿಸುವ ಉದ್ದೇಶದಿಂದ ವೃದ್ಧಿಗೊಳಿಸಿದಾಗ, ಅದು ಎರಡು ವಿಧವಾಗಿ ಹಾನಿಕರವಾದುದು. ಉತ್ಪನ್ನ ಫಲರಹಿತವಾದ ವೆಚ್ಚಗಳು ತೆರಿಗೆಗಳನ್ನು ತೆರುವ ಪ್ರಜೆಗೆ ಯಾವ ಪ್ರತಿಫಲವನ್ನೂ ತರುವುದಾಗದೆ ವ್ಯರ್ಥವಾಗಿ ಬೆಳ ಸಲ್ಪಟ್ಟಿರುವುವು. ರಾಷ್ಟ್ರೀಯ ನಾಣ್ಯವಾದ ರೂಪಾಯಿಯ ಅಲ್ಪಸ್ವಲ್ಪ ಬೆಲೆ ಯಲ್ಲಿಯೂ ಬಹಳ ನಷ್ಟ ಒರುವಂತೆ ಮಾಡಿ, ತನ್ನ ಸ್ವಂತ ಆದಾಯವನ್ನೇ ಕಡಿಮೆ ಮಾಡಿಕೊಳ್ಳುವನು. ಸರ್ ವಿಲಿಯಂ ಹಂಟರನ ಪ್ರಕಾರ ' ನಾವು ಹೊರಗಿನಿಂದ ಬರುವ ದಾಳಿಯನ್ನು ತಡೆದೂ, ದೇಶದಲ್ಲಿನ ಅನಾಯಕತ್ವ ವನ್ನೂ ಲೂಟಿ ದರೋಡೆಗಳನ್ನೂ ನಿಲ್ಲಿಸಿ, ವ್ಯವಸ್ಥೆಯನ್ನು ಏರ್ಪಡಿಸಿ ರಕ್ಷಿಸಿ

೧ ಹೆಚ್. ಯಂ. ಹಿಂಡಮನ್ನನ ' ಭಾರತದ ದಾರಿದ್ರ್ಯ ' ಪುಟ ೭೪

ದರೂ, ದೇಶದಾದ್ಯಂತವೂ ಶಾಲೆಗಳನ್ನೂ, ನ್ಯಾಯಸ್ಥಾನಗಳನ್ನೂ, ರಸ್ತೆಗಳನ್ನೂ, ರೈಲು ಮಾರ್ಗಗಳನ್ನೂ ಕಾಲುವೆಗಳನ್ನೂ ಸ್ಥಾಪಿಸಿ ಪ್ರಜೆಗಳಿಗೆ ಉತ್ಸಾಹವನ್ನು ತುಂಬಿ, ವ್ಯಾಪಾರಕ್ಕೆ ಉತ್ತೇಜನ ಕೊಟ್ಟರೂ ಅದೇನೂ ಲಾಭದಾಯಕವಲ್ಲ. ೧ ' ಆ ಪ್ರಜೆಗಳಿಗೆ ಸಾಕಷ್ಟು ತಿನ್ನಲು ಇಲ್ಲ ದಿದ್ದರೆ, ನಮ್ಮ ಆಡಳಿತದ ವೆಚ್ಚವನ್ನು ತುಂಬಲು ಶಕ್ತಿ ಸಾಲದಿದ್ದರೆ ಇವೆ ಲ್ಲವೂ ಲಾಭದಾಯಕವಾದುವಲ್ಲ. '

ಈ ಆರ್ಥಿಕ ನಷ್ಟಗಳಲ್ಲದೆ, ಕೊಟ್ಟುದಕ್ಕೆ ತಕ್ಕಷ್ಟು ಪೂರ್ಣ ಬೆಲೆಯ ಪ್ರತಿಫಲವು ಸಿಗದಿರುವುದರಿಂದ ಅದು ಮತ್ತಷ್ಟು ನಷ್ಟಕ್ಕೀಡಾಗುತ್ತಿದೆ. ತನ್ನ ಆಡಳಿತ ಸೂತ್ರಗಳನ್ನು ವಹಿಸಿದ ಅಧಿಕಾರಿಗಳು ಗಳಿಸಿರುವ ಅನುಭವ ವಿವೇಕಗಳಿಂದ ಪಡೆಯಬಹುದಾದ ಸೇವೆಯ ಅಪಾರ ಲಾಭವು, ದೇಶವು ತನ್ನ ವೆಚ್ಚಗಳಿಗೆ ಪ್ರತಿಫಲವಾಗಿ ಪಡೆಯಬಹುದಾದ ಮಹಾಲಾಭಗಳಲ್ಲಿ ಒಂದಾಗಿದೆ. ಆ ಅಧಿಕಾರಿಗಳು ತಮ್ಮ ಅಧಿಕಾರದಿಂದ ನಿವೃತ್ತರಾದ ಮೇಲೆ ದೇಶದ ಜೀವನದಲ್ಲಿ ನೆರವಾಗಿ ತಮ್ಮ ಹಿತೋಪದೇಶವನ್ನು ಕೊಡುತ್ತ, ಮುಂದಿನ ಜನಾಂಗವನ್ನು ರೂಪುಗೊಳಿಸಿದರೆ ಪ್ರಭುತ್ವವು ವೆಚ್ಚಮಾಡಿದ ಪ್ರಜಾದತ್ತ ಧನಕ್ಕೆ ಇದಕ್ಕಿಂತಲೂ ಮಹತ್ವದ ಲಾಭದಾಯಕ ಪ್ರತಿಫಲ ವಿರುವುದೇ ? ಆಂಗ್ಲೇಯ ಅಧಿಕಾರಿಯು ಅನುಭವವನ್ನು ಸಂಪಾದಿಸುವನು; ಅದಕ್ಕೆ ತಗಲುವ ವೆಚ್ಚವನ್ನು ಭಾರತೀಯ ಪ್ರಜೆಯು ಕೊಡುವನು. ಆದರೆ ಆ ಅನುಭವವು ಪರಿಪಕ್ವವಾದಾಗ ಆ ಅಧಿಕಾರಿಯು ಇಂಗ್ಲೆಂಡಿಗೆ ಹೋಗು ವನು; ತಾನು ಯಾವ ಜ್ಞಾನಾರ್ಜನೆಗೆ ತೆತ್ತಿತೋ ಅದರ ಲಾಭವನ್ನು ಹಿಂದೂ ದೇಶವು ಕಳೆದುಕೊಳ್ಳುವುದು. ಮತ್ತೆ ಈ ನಷ್ಟವೂ ಇಂಗ್ಲೆಂಡಿಗೆ ಲಾಭವೇ. ಹಿಂದೂದೇಶದಲ್ಲಿ ಅನುಭವ ತೆಗೆದುಕೊಂಡ ತನ್ನ ಮಕ್ಕಳಿಂದ ಪಡೆದ ವಿಶಾಲ ದೃಷ್ಟಿಯುತ ಭಾವನೆಗಳಿಂದಲೇ ರಾಜಕೀಯ ಪ್ರಪಂಚದಲ್ಲಿ ಇಂಗ್ಲೆಂಡಿ ಗಿರುವ ಈಗಿನ ನಾಯಕತ್ವವು ಗಳಿಸಲ್ಪಟ್ಟು, ಇಂಗ್ಲೆಂಡು ಭರತಖಂಡಕ್ಕೆ ಎಷ್ಟರ ಮಟ್ಟಿಗೆ ಋಣಿಯಾಗಿವೆಯೆಂದು ಯಾರು ಹೇಳಬಲ್ಲರು ?

—

೧ ಸರ್ ವಿಲಿಯಂ ಹಂಟರರ 'ರಾಣಿಯ ಆಳ್ವಿಕೆಯಲ್ಲಿ ಭಾರತದ ಪರಿಸ್ಥಿತಿ' ಪುಟ ೧೩೪

## ಪರಿಸಮಾಪ್ತಿ

ಪ್ರಜಾಸಮುದಾಯದ ದಾರಿದ್ರ್ಯವನ್ನು ನಿವಾರಿಸುವ ಮಾರ್ಗೋಪಾಯಗಳನ್ನು ಪರಿಶೀಲಿಸುತ್ತ, ಡಬ್ಲ್ಯು. ಯಸ್. ಬ್ಲಂಟರು, ೧ ' ರೈತನ ಹಸಿವನ್ನು ಕಡಿಮೆ ಮಾಡಲು ಶಾಸನ ಸಭೆಗಳ ಮೂಲಕ ಪರಿಹಾರ ಸಿಗುವದೆಂದು ನಾನು ನಂಬಲಾರೆ. ಅಥವಾ ಅವನ ಪರಿಸ್ಥಿತಿಯನ್ನು ಸರಿಪಡಿಸುವ ಸಂದರ್ಭದಲ್ಲಿ, ಲಂಡನ್ನಿನಲ್ಲಿಯೂ ಕಲಕತ್ತೆಯಲ್ಲಿಯೂ ಬೇರೂರಿರುವ ಆಂಗ್ಲೇಯರ ಹಿತದೃಷ್ಟಿಯಲ್ಲಿ ತ್ಯಾಗವು ಕಂಡುಬಂದ ವಿನಾ ಯಾವ ವಿಧವಾದ ಅವಕಾಶವೂ ಜಯವೂ ಸಿಗುವುದೆಂದು ನಾನು ನಂಬಲಾರೆ. ಈ ತೊಂದರೆಗಳೆಲ್ಲಕ್ಕೂ ಹಣವೇ ಕಾರಣವಲ್ಲದೆ ಶಾಸನಾಂಗದ ಕಾರ್ಯಾಚರಣೆಯಲ್ಲ. ಆರ್ಥಿಕಸ್ಥಿತಿಯು ಭದ್ರವಾದ ತಳಹದಿಯ ಮೇಲೆ ನಿಲ್ಲದ ವರೆಗೂ, ಮತ್ಯಾವ ವಿಧದ ನೀತಿಯನ್ನು ಆಚರಣೆಗೆ ತಂದರೂ ವಾಸ್ತವವಾಗಿ ಏನೂ ಲಾಭವಿಲ್ಲ ' ವೆಂದು ಸಲಹೆ ಕೊಟ್ಟಿರುವರು. ನಾವು ಬಡವನ ಬಂಡವಾಳವಾದ ರೂಪಾಯಿಯನ್ನು ಉಪಯೋಗಿಸುವುದನ್ನು ನಿಲ್ಲಿಸಬೇಕು. ಅದರ ಸ್ಥಾನದಲ್ಲಿ ಸಿರಿವಂತವಾದ ಆಧಾರಗಳಿಂದ ಒದಬಹುದಾದ, ಇನ್ನೂ ಅದರ ಮೇಲೆ ಕೈಹಾಕದಿರುವ, ಆದಾಯಗಳನ್ನು ಬಯಲಿಗೆಳೆದು ಉಪಯುಕ್ತತೆಗೆ ತರಬೇಕು. ಸಾಮ್ರಾಜ್ಯದೊಂದಿಗೆ ಹಿಂದೂದೇಶದ ಆರ್ಥಿಕಸ್ಥಿತಿಯ ಮೇಲೆ ಸಾಮ್ರಾಜ್ಯವು ಹೇರಿರುವ ಹೊರೆಯನ್ನು ತಿದ್ದಿ ಸರಿಪಡಿಸಿದ್ದಾದರೆ ಅಷ್ಟು ಮಾತ್ರ ಏರ್ಪಡಿಸಿ ಮತ್ತೇನನ್ನು ಮಾಡದಿದ್ದರೂ, ಆಗ ಹಿಂದೂದೇಶದ ಪ್ರಭುತ್ವವು ಹಿಂದೂದೇಶದ ಸಂಪತ್ತನ್ನು ವೃದ್ಧಿಗೊಳಿಸುವ ಅನೇಕ ಮಹತ್ವದ ಸುಧಾರಣೆಗಳನ್ನು ಪ್ರಾರಂಭಿಸಬಲ್ಲುದು ' ಎಂದು ಮ್ಯಾಕ್ಡೊನಾಲ್ಡರು ಹೇಳಿರುವರು. ೨

ಮಾನವ ಗುಣವು ಹೀಗೆಯೇ ಇರುವವರೆಗೂ ಹಿಂದೂದೇಶದ ಆರ್ಥಿಕ ಸಂಪತ್ತು ಹಿಂದೂದೇಶದ ಜಗತ್ತುಗಳಿಗೆ ಅನುಕೂಲವಾಗುವಂತೆ ಎಂದಿಗೂ ಸರಿಹೊಂದಲಾರದು. ಅದನ್ನು ರೂಪುಗೊಳಿಸುತ್ತಿರುವ ಆಡಳಿತದ ಅಧಿಕಾರವು ಹಿಂದೂದೇಶದ ಹಿತದೃಷ್ಟಿಯಿಂದಿದ್ದು ಆ ಧ್ಯೇಯಸಾಧನೆಗಾಗಿ

---

೧ ಡಬ್ಲ್ಯು. ಎಸ್. ಬ್ಲಂಟರ' ರಿಪನ್ನರ ಆಳ್ವಿಕೆಯಲ್ಲಿ ಹಿಂದೂದೇಶ ' ಪುಟ ೨೪೭

೨ ಮ್ಯಾಕ್ಡೊನಾಲ್ಡರ ' ಹಿಂದೂದೇಶದ ಆಡಳಿತ ' ಪುಟ ೧೫೮

ದುಡಿಯುವ ವರೆಗೂ ಎಂದಿಗೂ ಅನುಕೂಲವಾಗಲಾರದು. ತೆರಿಗೆಯನ್ನು ವಿಧಿಸುವ ವಿಧಾನವು ಉತ್ಪತ್ತಿಯನ್ನು ಹೆಚ್ಚಿಸುವಂತಹದೂ ಜನರ ಚಟುವಟಿಕೆಗೆ ಉತ್ತೇಜನ ಕೊಡುವಂತಹುದೂ ಆಗಿರಬೇಕು. ತೆರಿಗೆ ಹಾಕುವ ವಿಧಾನವು ಚಿಕ್ಕ ಪುಟ್ಟ ಕೈಗಾರಿಕೆಗಳನ್ನು ಪೋಷಣೆಮಾಡಿದಾಗ, ಯಾವ ಆಶ್ರಯದಿಂದ ಆದಾಯವು ಉತ್ಪನ್ನವಾಗುವುದೋ ಆ ಆಶ್ರಯವನ್ನು ತೆರಿಗೆಯನ್ನು ವಿಧಿಸುವ ವಿಧಾನವು ನಾಶ ಪಡಿಸದಿದ್ದಾಗ, ಹಸಿವಿನಿಂದ ಸಾಯುತ್ತಿರುವ ಪ್ರಜಾಸಮುದಾಯವು ವಿಶೇಷ ದುಂದುಗಾರಿಕೆಯಿಂದಲೂ ವೈಭವದಿಂದಲೂ ಅಧಿಕಾರ ನಡೆಸುತ್ತಿರುವ ಆಡಳಿತದ ಹೊರೆಯನ್ನು ಹೊರಲಾಗದೆಂದು ವಿಧಾಯಕವಾದಾಗ, ಹಿಂದೂದೇಶದ ಆದರಾತಿಥ್ಯಗಳ ಮರೆಯಲ್ಲಿ ತಮ್ಮ ಅದೃಷ್ಟಗಳನ್ನೇ ರೂಪುಗೊಳಿಸಿಕೊಂಡಿರುವವರು ಆಡಳಿತದ ಹೊರೆಯಲ್ಲಿ ತಮ್ಮ ಭಾಗದ ಭಾರವನ್ನು ಹೊತ್ತುಕೊಳ್ಳುವಂತಾದಾಗ, ಹಿಂದೂದೇಶದ ರಾಜ್ಯಾದಾಯವೆಲ್ಲವೂ ಪ್ರಜೆಗಳಿಗೆ ಪೂರ್ಣ ಫಲವನ್ನು ತರುವಂತಾದಾಗ, ಪ್ರಭುತ್ವವು ಜನರಿಗಾಗಿ ಮಾಡುವ ಕಾರ್ಯಾಚರಣೆಗಳೆಲ್ಲವೂ ಸೇವಾತತ್ವದ ಮೇಲೆ ನಿರೂಪವಾದಾಗ, ಹಾಗೆ ಆಚರಿಸುವ ಕಾರ್ಯಗಳೆಲ್ಲವೂ ರಾಷ್ಟ್ರ ಹಿತಕ್ಕೆ ವಿರೋಧವಲ್ಲದಂತಿರುವಾಗ, ಹಿಂದೂದೇಶಕ್ಕೆ ಅತ್ಯಾವಶ್ಯಕವಾದುವಲ್ಲದೆ ಬೇರಾವುದನ್ನೂ ಪ್ರಭುತ್ವವು ತನ್ನ ಕರ್ತವ್ಯವನ್ನಾಗಿ ಆರಿಸದಾಗ, ಆಗಲೇ, ಆವಾಗಲೇ ಹಿಂದೂದೇಶವು ಆರ್ಥಿಕಾಭಿವೃದ್ಧಿಯನ್ನು ಪಡೆಯಬಹುದೆಂದು ಆಶಿಸಬಹುದು. ಹಿಂದೂದೇಶವು ಆರ್ಥಿಕ ಸ್ವಾತಂತ್ರ್ಯವನ್ನು ಪಡೆಯುವವರೆಗೂ ಇದೆಂದಿಗೂ ಸಾಧ್ಯವಾಗಲಾರದು.

—

## ಪರಿಶಿಷ್ಟ "ಅ"

### ೧. ಜನಸಂಖ್ಯೆ

ಜನಗಣತಿ ೧೯೨೧: ಆಂಗ್ಲೇಯ ಆಡಳಿತದಲ್ಲಿರುವ ಪ್ರಾಂತ್ಯಗಳೂ ಬರ್ಮ ಮತ್ತು ಆಶ್ರಿತ ಸಂಸ್ಥಾನಗಳೂ

#### ೧ ಪ್ರಜಾಸಂಖ್ಯೆಯ ಹಂಚಿಕೆ: ಹಳ್ಳಿಯಲ್ಲಿ ಮತ್ತು ಪಟ್ಟಣಗಳಲ್ಲಿ

| ತರಗತಿ. | ಹಳ್ಳಿಗಳ ಅಥವಾ ಪಟ್ಟಣಗಳ ಸಂಖ್ಯೆ | | ಜನಸಂಖ್ಯೆ ನೂರಕ್ಕೆ |
|---|---|---|---|
| ೫೦೦ಕ್ಕಿಂತ ಕಡಿಮೆ ಜನರುಳ್ಳ ಹಳ್ಳಿಗಳು | ೫,೧೭,೦೩೬ | | ೩೦.೧೦ |
| ೫೦೦—೨,೦೦೦ ,, | ೧,೫೨,೨೫೯ | | ೪೩.೦೫ |
| ೨,೦೦೦—೫,೦೦೦ ,, | ೧೫,೯೬೫ | | ೧೪.೧೩ |
| ಒಟ್ಟು ಹಳ್ಳಿಗಳದು | | ೮೭.೨೮% | ೨೭,೮೩,೭೩,೬೦೪ |
| ೫,೦೦೦—೨೦,೦೦೦ ಪ್ರಜಾಸಂಖ್ಯೆಯುಳ್ಳ ಪಟ್ಟಣಗಳು | ೨,೩೮೮ | | ೬.೦೯ |
| ೨೦,೦೦೦—೧,೦೦,೦೦೦ ,, | ೨೫೩ | | ೨.೯೭ |
| ೧,೦೦,೦೦೦—ಅದರ ಮೇಲಿರವುವು | ೩೪ | | ೨.೫೩ |
| ಒಟ್ಟು ಪಟ್ಟಣಗಳದು | | ೧೧.೫೯% | ೩,೬೬,೦೨,೨೮೬ |
| ಯಾವ ತರಗತಿಗೂ ಸೇರದವು | ೪೬ | ೧.೧೩% | ೨೯,೬೬,೫೯೦ |
| ಒಟ್ಟು | | ೧೦೦ | ೩೧,೮೯,೪೨,೪೮೦ |

#### ೨. ವೃತ್ತಿಯ ಆಧಾರದ ಮೇಲೆ ಪ್ರಜಾಸಂಖ್ಯೆಯ ಹಂಚಿಕೆ:

| | |
|---|---|
| ಹಸಿಯ ಅಂದರೆ ಕಚ್ಚಾ ಪದಾರ್ಥದ ಉತ್ಪತ್ತಿ. | ೭೩.೧೫% |
| ಪದಾರ್ಥದ ತಯಾರಿಕೆಯ ಮತ್ತು ಸರಬರಾಯಿ:—ಕೈಗಾರಿಕೆ, ವ್ಯಾಪಾರ, ವಾಣಿಜ್ಯ, ಇತ್ಯಾದಿ. | ೧೭.೫೯ |
| ಪ್ರಭುತ್ವ ಸೈನ್ಯದ ಆಡಳಿತವೆಚ್ಚ | ೧.೫೩ |
| ವೃತ್ತಿಗಳು | ೧.೫೯ |
| ಇತರ | ೬.೧೪ |
| | ೧೦೦.೦೦ |

## ೩. ಮತ, ಸ್ತ್ರೀ ಪುರುಷ, ವಿದ್ಯಾವಂತರು ಈ ವಿಭೇದಗಳ ಆಧಾರದ ಮೇಲೆ ಹತ್ತು ಸಹಸ್ರ ಜನರ ಪ್ರಕಾರ ಎಣಿಕೆ ಮಾಡಿರುವ ಪ್ರಜಾಸಂಖ್ಯೆಯ ಹಂಚಿಕೆ

| ಮತ | ೧೦,೦೦೦ ಮಂದಿಯ ಪಂಗಡದ ಜನಸಂಖ್ಯೆ | ವಿದ್ಯಾವಂತರು | | | | | ಅವಿದ್ಯಾವಂತರು | | | | | ಶರಾ |
|---|---|---|---|---|---|---|---|---|---|---|---|---|
| | | ಗಂಡಸರು | ನೂರಕ್ಕೆ ಗಂಡಸರು | ಹೆಂಗಸರು | ನೂರಕ್ಕೆ ಹೆಂಗಸರು | ಒಟ್ಟು | ಗಂಡಸರು | ನೂರಕ್ಕೆ ಗಂಡಸರು | ಹೆಂಗಸರು | ನೂರಕ್ಕೆ ಹೆಂಗಸರು | ಒಟ್ಟು | |
| ಹಿಂದೂಗಳು | ೬,೮೫೬ | ೪೦೪ | ೧೧.೫೩ | ೪೬ | ೧.೩೮ | ೪೫೦ | ೩,೧೦೨ | ೮೮.೪೭ | ೩,೩೦೪ | ೯೮.೬೨ | ೬,೪೦೬ | — |
| ಮಹಮ್ಮದೀಯರು | ೨,೧೭೪ | ೯೨ | ೮.೧ | ೮ | ೦.೭೩ | ೧೦೦ | ೧,೦೪೭ | ೯೧.೯ | ೧,೦೨೭ | ೯೯.೨೭ | ೨,೦೭೪ | ಮುಖ್ಯವಾಗಿ ಬಂಗಾಲ, ಪಂಜಾಬ, ಸಂ.ಪ್ರಾಂತ, ಬಿಹಾರ, ಓರಿಸಾಗಳಲ್ಲಿ |
| ಬೌದ್ಧರು | ೩೬೬ | ೮೪ | ೪೮.೪೪ | ೧೨ | ೬.೧೯ | ೯೬ | ೮೯ | ೫೧.೫೬ | ೧೮೧ | ೯೩.೮೧ | ೨೭೦ | ಬರ್ಮಾದಲ್ಲಿ ೧,೧೨,೦೧,೯೪೩ ಹಾಗೂ ಇಂಡಿಯಾದಲ್ಲಿ ೩,೬೯,೩೨೫ |
| ಆದಿವಾಸಿಗಳು | ೩೦೯ | ೨ | ೧.೪ | — | ೦.೧೨ | ೨ | ೧೫೩ | ೯೮.೬ | ೧೫೪ | ೯೯.೮೮ | ೩೦೭ | ಬಿಹಾರ, ಓರಿಸಾ, ಮಧ್ಯಪ್ರಾಂತ, ಬೀರಾರು ಮತ್ತು ಆಸಾಮುಗಳಲ್ಲಿ |
| ಕ್ರೈಸ್ತರು:<br>ಯುರೋಪಿನವರು ೫.೬<br>ಆಂಗ್ಲ-ಹಿಂದೂಗಳು ೩.೭<br>ಹಿಂದೂಗಳು ೧೪೧.೭ | ೧೫೧ | ೨೪ | ೩೦.೯ | ೧೩ | ೧೮.೦೪ | ೩೭ | ೫೪ | ೬೯.೧ | ೬೦ | ೮೧.೯೬ | ೧೧೪ | ಮದರಾಸಿನಲ್ಲಿ |
| ಶೀಖರು | ೧೦೨ | ೫ | ೯.೩೯ | ೧ | ೧.೪ | ೬ | ೫೩ | ೯೦.೬೧ | ೪೩ | ೯೮.೬ | ೯೬ | ಪಂಜಾಬಿನಲ್ಲಿ |
| ಜೈನರು | ೩೭ | ೧೦ | ೫೧.೩೪ | ೧ | ೭.೬ | ೧೧ | ೯ | ೪೮.೬೬ | ೧೭ | ೯೨.೪ | ೨೬ | ಬೊಂಬಾಯಿ, ಮಧ್ಯಪ್ರಾಂತ ಮತ್ತು ಸಂಯುಕ್ತಪ್ರಾಂತಗಳಲ್ಲಿ |
| ಪಾರ್ಶಿಯವರು | ೩ | ೧.೩ | ೭೮.೭೫ | ೧ | ೬೬.೯೧ | ೨.೩ | ೦.೩ | ೨೧.೨೫ | ೦.೪ | ೩೩.೦೯ | ೦.೭ | ಬೊಂಬಾಯಿನಲ್ಲಿ |
| ಯೆಹೂದ್ಯರೂ ಇತರರೂ | ೨ | ೦.೬೫ | ೫೦.೦೦ | ೦.೨ | ೨೪.೦೦ | ೦.೮೫ | ೦.೬೫ | ೫೦ | ೦.೫ | ೭೬.೦೦ | ೧.೧ | ಬೊಂಬಾಯಿ, ಬಂಗಾಲ, ಬರ್ಮಾ ಮತ್ತು ಮದ್ರಾಸುಗಳಲ್ಲಿ |
| | ಒಟ್ಟು...೧೦,೦೦೦ | ೬೨೩ | — | ೮೨ | — | ೭೦೫ | ೪೫೦೮ | — | ೪೭೮೭ | — | ೯೨೯೫ | |

## ೪. ಬ್ರಿಟಿಷ್ ಹಿಂದುಸ್ಥಾನದಲ್ಲಿ ಮಾತ್ರ ಇರುವ ಜನಸಾಂದ್ರತೆ ಮತ್ತು ಪ್ರಜಾಭಿವೃದ್ಧಿ.

ಹಿಂದೂದೇಶದ ದಾರಿದ್ರ್ಯಕ್ಕೆ ಕಾರಣವು ತೀವ್ರಗತಿಯಿಂದ ಬೆಳೆಯುತ್ತಿರುವ ಪ್ರಜಾಭಿವೃದ್ಧಿಯೆಂದು ಪ್ರಭುತ್ವದ ನೀತಿಯನ್ನು ಸಮರ್ಥಿಸುವ ತಾರ್ಕಿಕರು ಮಾತೆತ್ತಿದರೆ ಹೇಳುವರು; ಈ ವಿಚಾರವಾಗಿ ಮೂರನೆಯ ಅಧ್ಯಾಯದಲ್ಲಿ ಹೇಳಿದುವುದಕ್ಕೆ ಉಪಸಂಹಾರವಾಗಿ ಈ ಕೆಳಗೆ ಕೊಟ್ಟಿರುವ ಪಟ್ಟಿಯನ್ನು ತಯಾರಿಸಿದೆ. ಬ್ರಿಟಿಷ್ ಹಿಂದುಸ್ಥಾನದ ಪ್ರದೇಶವನ್ನು ಆಗಾಗ್ಗೆ ಹೆಚ್ಚಿಸುತ್ತಿರುವುದರಿಂದ, ಹಿಂದೂದೇಶದ ಪ್ರಜಾವೃದ್ಧಿಯನ್ನು ದಶಮಾನಕ್ಕೆ ಸರಿಹೋಲಿಸಿ ತಾರತಮ್ಯವನ್ನು ತಿಳಿಯಲು ಈ ಪರಿಪೂರ್ಣ ಸಂಖ್ಯೆಗಳಿಂದ ಆಗುತ್ತಿಲ್ಲ; ಆದುದರಿಂದ ಈ ಪ್ರಾದೇಶಿಕವಿಸ್ತೀರ್ಣದ ರಗಳೆಯನ್ನು ನಿವಾರಿಸಿಕೊಳ್ಳಲು ಪ್ರತಿಯೊಂದು ಚದರಮೈಲಿಯ ಪ್ರಜಾಬಲವನ್ನು ತೆಗೆದುಕೊಂಡಿದೆ. ಫ್ರಾನ್ಸದೇಶದಲ್ಲಿ ಯಾವಾಗಲೂ ಪ್ರಜಾಬಲವು ಸ್ಥಾಯಿಯಾಗಿರುವುದೆಂದು ತಿಳಿಯಲಾಗಿದೆ. ಇಂಗ್ಲೆಂಡಿನಲ್ಲಿ ಬಹಳ ಅಭಿವೃದ್ಧಿ ಹೊಂದಿದೆಯೆಂದು ಹೇಳಲಾಗಿದೆ. ಆದುದರಿಂದ ಈ ದೇಶಗಳ ಸಂಗಡ ಹೋಲಿಸಿ ತೋರಿಸಿದೆ.

| | ಚದರ ಮೈಲಿಗೆ ಇರುವ ಪ್ರಜಾಸಂಖ್ಯೆ | | | ೧೮೭೧ನೆಯ ವರುಷವನ್ನು ಆಧಾರವಾಗಿ ಹೋಲಿಸಿದಾಗ | | |
|---|---|---|---|---|---|---|
| ಜನಗಣನೆಯ ವರುಷ. | ಹಿಂದೂ ದೇಶ. | ಫ್ರಾನ್ಸ | ಇಂಗ್ಲೆಂಡು ವೇಲ್ಸ್. | ಹಿಂದೂ ದೇಶ. | ಫ್ರಾ. | ಇಂ. ವೇಲ್ಸ್ |
| ೧೮೭೧ | ೨೧೫ | ೧೭೪ | ೩೮೯ | ೧೦೦ | ೧೦೦ | ೧೦೦ |
| ೧೮೮೧ | ೨೨೭ | ೧೮೩ | ೪೪೫ | ೧೦೫.೫ | ೧೦೪.೬ | ೧೧೪.೪ |
| ೧೮೯೧ | ೨೨೯ | ೧೮೫ | ೪೯೭ | ೧೦೬.೫ | ೧೦೬.೩ | ೧೨೮ |
| ೧೯೦೧ | ೨೧೦ | ೧೮೮ | ೫೫೮ | ೯೭.೬ | ೧೦೮ | ೧೪೩.೪ |
| ೧೯೧೧ | ೨೩೨ | ೧೮೯ | ೬೧೮ | ೧೦೭.೯ | ೧೦೮.೬ | ೧೫೮.೮ |
| ೧೯೨೧ | ೨೨೬ | ೧೮೪ | ೬೪೯ | ೧೦೫.೧ | ೧೦೫.೭ | ೧೬೬.೮ |

| | ಹಿಂದೂದೇಶ | ಫ್ರಾನ್ಸ | ಇಂಗ್ಲೆಂಡ ವೇಲ್ಸ್ |
|---|---|---|---|
| ಅರ್ಧ ಶತಮಾನದಲ್ಲಿ ಅಭಿವೃದ್ಧಿ | ೫.೧ | ೫.೭ | ೬೬.೮ |
| ಹತ್ತುವರುಷಕ್ಕೊಮ್ಮೆ ಆದ ಅಭಿವೃದ್ಧಿಯ ಸರಾಸರಿ. | ೧.೦% | ೧.೧೫% | ೧೩.೩% |

(ಹತ್ತು ವರುಷಕ್ಕೊಮ್ಮೆ ನೂರಕ್ಕೆ ಒಬ್ಬರಂತೆ ಅಭಿವೃದ್ಧಿಯು ಸಾಮಾನ್ಯವಾಗಿ ಆಗಿರಬೇಕು.)

## ಪರಿಶಿಷ್ಟ " ಆ "

### ವ್ಯಾವಸಾಯಿಕ ಅಂಕಿ ಅಂಶಗಳು

### ೧೯೨೭-೧೯೨೮ನೆಯ ಸಾಲಿಗೆ

| ಧಾನ್ಯಗಳು. | ಲಕ್ಷ ಎಕರೆಗಳು. | ರೂಪ | ಲಕ್ಷ ಪ್ರ. ಬೆಳೆ |
|---|---|---|---|
| ಅಕ್ಕಿ | ೭೬೬ | ಟನ್ನುಗಳು | ೨೭೩ |
| ಗೋದಿ | ೨೪೬ | ,, | ೬೩ |
| ಬಾರ್ಲಿ | ೬೮ | ,, | ೨೧ |
| ಜೋಳ | ೨೧೨ | ,, | ೫೦ |
| ಸಜ್ಜೆ | ೧೪೧ | ,, | ೨೪ |
| ರಾಗಿ | ೩೮ | ,, | — |
| ಮೆಕ್ಕೆಯ ಜೋಳ | ೬೯ | ,, | ೨೩ |
| ದ್ವಿದಳ ಧಾನ್ಯಗಳು | ೧೪೦ | ,, | ೬೨ |
| ಇತರ | ೨೯೬ | ,, | — |
| | ೧,೯೬೬ | | |
| ಕಾಯಿಪಲ್ಯಗಳು, ಹಣ್ಣು, ಸಂಬಾರ ಪದಾರ್ಥಗಳು | ೭೮ | | |
| ಸಕ್ಕರೆ | ೩೦ | ,, | ೩೧ |
| ಕಾಫಿ | ೧ | ಪೌಂಡು | ೧೯೧ |
| ಚಹಾ | ೭ | ,, | ೩೬೧೨ |
| | ೩೮ | | |

ಎಣ್ಣೆಯ ಬೀಜಗಳು:

| | | | |
|---|---|---|---|
| ಅಗಸೆ | ೨೨ | ಟನ್ನುಗಳು | ೩ |
| ಎಳ್ಳು | ೩೫ | ,, | ೪ |
| ಕುಸುಂಬಿ ಮತ್ತು ಸಾಸುವೆ | ೩೩ | ,, | ೮ |
| ನೆಲಗಡಲೆ | ೪೭ | ,, | ೨೫ |
| ಕೊಬ್ಬರಿ | ೬ | | |
| ಔಡಲ | ೬ | | |
| ಇತರ | ೧೨ | | |
| | ೧೬೧ | | |
| ಹತ್ತಿ | ೧೪೮ | ೪೦೦ ಬೇಲ್ | ೧೦೧ |
| ಸಣಬು | ೩೩ | | |
| ಇತರ ನಾರು | ೭ | | |
| ನೀಲಿ ಮತ್ತು ಅಫೀಮು | ೧ | | |
| ಹೊಗೆಸೊಪ್ಪು | ೧೧ | ಟನ್ನುಗಳು | ೬ |
| ಹುಲ್ಲು | ೯೨ | | |
| | ೨೯೨ | | |
| | ೨,೫೩೫ | | |

## ಪರಿಶಿಷ್ಟ 'ಇ' ವ್ಯಾಪಾರದ ಅಂಕಿಗಳು

೧೯೨೭—೨೮ನೆಯ ಸಾಲಿನದು

### ೧. ರಫ್ತು: ಪರದೇಶಕ್ಕೆ ಕಳುಹಿಸಿದುದು

| ವಸ್ತುಗಳು | ಲಕ್ಷ ಸಂಖ್ಯೆಯಲ್ಲಿ ಬೆಲೆಯಾದ ರೂಪಾಯಿಗಳು | ರೂಪ | ಪ್ರಮಾಣ |
|---|---|---|---|
| ಪ್ರಾಣಿಗಳು | ೪೭ | | ೫,೭೮,೫೩೦ |
| ಅಲಂಕಾರ ವಸ್ತುಗಳು, ಉಡುಪು | ೨೪ | | |
| ತವುಡು ತುಂಡುಗಳು | ೧೩೩ | ಟನ್ನುಗಳು | ೨,೭೦,೮೭೫ |

| | | | |
|---|---|---|---|
| ಕೂದಲು, ನಾರು(ಬ್ರಷ್‌ಗಾಗಿ) | ೪೬ | ಹಂ. ವೇ. | ೧,೬೦,೯೫೦ |
| ಮೇಣದ ಬತ್ತಿಗಳು | ೧೨ | ಪೌಂಡುಗಳು | ೯೩,೯೭,೫೩೩ |
| ಇದ್ದಿಲು | ೭೭ | ಟನ್ನುಗಳು | ೬,೩೪,೫೦೭ |
| ಕಾಫಿ | ೨೩೨ | ಹಂ. ವೇ. | ೨,೭೬,೬೬೮ |
| ಕುರಿಹಗ್ಗದ ಸಾಮಾನು | ೧೧೪ | ಟನ್ನುಗಳು | ೩೩,೫೮೭ |
| ಅರಳೆ | ೪೮೦೧ | ,, | ೪,೮೨,೩೩೬ |
| ದಾರ | ೧೫೮ | ಪೌಂಡುಗಳು | ೨,೪೬,೯೬,೮೯೦ |
| ತಯಾರಿಸಿದ ಬಟ್ಟೆಗಳು | ೬೭೯ | ಗಜಗಳು | ೬,೮೬,೨೩,೭೦೮ |
| ಔಷಧ ಸಾಮಗ್ರಿಗಳೂ | | | |
| ಔಷಧಗಳೂ | ೩೫ | ಹಂ. ವೇ. | ೨೧,೪೩,೪೭೧ |
| ಬಣ್ಣಗಳು | ೧೬೧ | | |
| ಮೀನು | ೮೭ | | |
| ಹಣ್ಣು ಕಾಯಿಪಲ್ಯಗಳು | ೧೦೬ | | |
| **ದವಸ ಮತ್ತು ದ್ವಿದಳ ಧಾನ್ಯಗಳು:–** | | | |
| ಬಾರ್ಲಿ | ೮೫ | ಟನ್ನುಗಳು | ೭೧,೬೨೮ |
| ಅವರೆ, ತೊಗರಿ ಇತ್ಯಾದಿ | ೩೯ | ,, | ೪೧,೯೭೭ |
| ಹುರಳಿ, ಹೆಸರು ಉದ್ದು | ೨೮ | ,, | ೧೭,೫೬೭ |
| ಜೋಳ | ೩೫ | ,, | ೨೧,೧೧೫ |
| ಕಾಯಿಧಾನ್ಯ | ೨೯ | ,, | ೧೬,೫೩೮ |
| ಮುಸುಕಿನ ಜೋಳ | ೧೦ | ,, | ೯,೯೯೬ |
| ದ್ವಿದಳ ಧಾನ್ಯಗಳು | ೯೨ | ,, | ೫೭,೨೫೨ |
| ಅಕ್ಕಿ | ೩,೪೦೧ | ,, | ೨೧ ೮೬,೭೬೦ |
| ಗೋದಿ | ೪೪೧ | ,, | ೨,೯೯,೭೩೩ |
| ಗೋದಿಯ ಹಿಟ್ಟು | ೧೩೦ | ,, | ೬೦,೪೨೪ |
| ಇತರ | ೩ | ,, | ೧,೫೮೧ |
| ಅಂಟು ಮತ್ತು ರಾಳ | ೨೦ | ಹಂ. ವೇ. | ೬೬,೬೩೬ |
| ಪುಂಡಿನಾರು ಕಚ್ಚಾ | ೮೧ | ,, | ೪,೮೪,೧೪೬ |

| | | | |
|---|---|---|---|
| ಚರ್ಮಗಳು ಹಸಿಯುವು | ೮೮೧ | ಟನ್ನುಗಳು | ೬೪,೩೮೧ |
| ,, ಹದಮಾಡಿದುವು | ೯೦೭ | ,, | ೨೩,೨೫೬ |
| ಕೊಂಬುಗಳು | ೯ | ಹಂ. ವೇ. | ೪೩,೧೧೦ |
| ಸಣಬು ಕಚ್ಚಾ | ೩,೦೬೬ | ಟನ್ನುಗಳು | ೮,೯೧,೯೦೭ |
| ,, ತಯಾರಿಸಿದುದು | ೫,೩೫೬ | ಬೇಲಗಳು | ೪೬,೩೧,೩೯,೬೮೯ |
| | | ಒಟ್ಟು ಗಜ | ೧೫೫,೨೭,೫೧,೩೯೦ |
| ಅರಗು | ೬೯೯ | ಹಂ. ವೇ. | ೫,೪೩ ೫೮೪ |
| ಗೊಬ್ಬರ ಎಲುಬು | ೧೨೮ | ಟನ್ನುಗಳು | ೧,೨೦,೩೦೨ |
| ಲೋಹಗಳು | ೮೯೭ | ,, ಮಾಂಗನೀಸು | |
| | | ಅದುರು | ೭,೦೩,೯೪೯ |
| | | ಇತರ | ೬,೭೩,೭೨೯ |
| ಅಭ್ರಕ | ೯೩ | ಹಂ. ವೇ. | ೮೨.೫೧೧ |
| ಹಿಂಡಿ | ೩೧೪ | ಟನ್ನುಗಳು | ೨,೭೫,೫೯೫ |
| ಎಣ್ಣೆಗಳು | ೭೧ | ಗ್ಯಾಲನ್ನುಗಳು | ೧೪,೫೮,೨೧೨ |
| ಅಫೀಮು | ೧೯೯ | ಹಂ. ವೇ. | ೬,೨೦೨ |
| ಮೇಣ | ೨೪೨ | ಟನ್ನುಗಳು | ೫೧,೧೩೨ |
| ಆಹಾರ ಪದಾರ್ಥಗಳು | ೬೧ | | |
| ಹಸಿಯು ರಬ್ಬರು | ೨೫೭ | ಪೌಂಡುಗಳು | ೨,೫೪,೦೩,೨೬೬ |
| ಪೆಟ್ಲುಪ್ಪು | ೧೨ | ಹಂ. ವೇ. | ೯೯,೦೬೩ |
| ಬೀಜಗಳು | ೨,೬೭೦ | ಟನ್ನುಗಳು | ೧೨,೦೯,೯೭೩ |
| ರೇಷ್ಮೆ ಕಚ್ಚಾ | ೩೬ | ಪೌಂಡುಗಳು | ೧೩,೩೨,೫೧೯ |
| ,, ತಯಾರಿಸಿದುದು | ೬ | ಗಜಗಳು | ೮,೮೧,೧೫೪ |
| ಸಂಭಾರ ಪದಾರ್ಥಗಳು | ೨೪೦ | ಹಂ. ವೇ. | ೪,೩೭,೫೫೧ |
| ಸಕ್ಕರೆ | ೮ | ಟನ್ನುಗಳು | ೨,೮೯೧ |
| ಟೀ ಸೊಪ್ಪು | ೩,೨೪೮ | ಪೌಂಡುಗಳು | ೩೬,೧೬,೧೪,೧೨೪ |
| ಟೀ ಪುಡಿ | ೪ | ,, | ೪೧,೧೪,೬೩೮ |
| ಹೊಗೆಸೊಪ್ಪು | ೧೦೬ | ,, | ೨,೯೨,೪೬,೪೮೯ |

ಸೌದೆ ೧೬೬ ಘನ ಟನ್ನುಗಳು ೫೦,೬೨೪

ಉಣ್ಣೆ ಕಚ್ಚಾ ೪೩೬ ಪೌಂಡುಗಳು ೫,೦೧,೬೫,೮೯೨

,, ತಯಾರಿಸಿದುದು ೯೭

ಇತರ ವಸ್ತುಗಳು ೫೭೦

———

ಒಟ್ಟು ೩೧,೯೧೫ ಲಕ್ಷ ರೂಪಾಯಿಗಳು.

**೨. ಆಮದು: ಪರದೇಶದಿಂದ ನಮ್ಮ ದೇಶಕ್ಕೆ ಬಂದುದು**

ಉಡುಪು ಅಲಂಕಾರವಸ್ತುಗಳು ೧೬೪

ಆಯುಧಗಳು ಅವುಗಳ ಉಪಕರಣಗಳು ೭೧

ಯಂತ್ರದ ಬೆಲ್ಟುಗಳು ೮೭

ಪುಸ್ತಕಗಳು ೬೨

ಬೂಟ್ಸು ಮತ್ತು ಚೆಪ್ಪಲಿಗಳು ೬೭ ಜತೆಗಳು ೨೭,೭೨,೯೬೪

ಮನೆ ಕಟ್ಟುವ ಮುಟ್ಟುಗಳು ೧೨೯

ಗುಂಡಿಗಳು ೩೨

ಬಂಡಿಗಳು ೧೭

ಔಷಧ ಸಾಮಗ್ರಿಗಳು ೨೬೫

ಜೇಡಿಮಣ್ಣು ೧೯ ಹಂ. ವೇ. ೫,೩೩ ೭೯೫

ಗಡಿಯಾರಗಳು ೨೭ ಸಂಖ್ಯೆ ೬,೩೦,೨೪೬

ಇದ್ದಿಲು ೬೩ ಟನ್ನುಗಳು ೨,೭೩ ೮[illegible]೮

ಅರಳೆ: ಕಚ್ಚಾ ೬೭೪ ,, ೬೬,೦೬೨

,, ನೂತ ನೂಲು ೬೭೯ ಪೌಂಡು ೫,೨೩,೪೪,೫೩೪

,, ತಯಾರಾದುದು ೫,೮೫೬ ಒಟ್ಟು: ಗಜ ೨೦೨,೬೫,೨೦೬೮೦

ಹಗ್ಗ ನೂಲಿಸದು ೪೨,೫೯,೯೯೭ ಪೌಂಡು

ದುಪ್ಪಟ್ಟಿ ,, ೫೨,೨೦ ೧೬೬

ಶಾಲುಗಳು ಸಂಖ್ಯೆ ೮೩,೧೦,೪೪೭

| | | | |
|---|---|---|---|
| ಚಾಕು ಚೂರಿ ಮುಂತಾದವು | ೩೯ | | |
| ಬೈಸಿಕಲ್ಲುಗಳು | ೧೧೮ | | ೧,೩೮,೭೮೩ |
| ಔಷಧಗಳೂ ಔಷಧಸಾಮಗ್ರಿಗಳೂ | ೧೯೮ | | |
| ಬಣ್ಣದ ಜೀನಸುಗಳು | ೨೬೫ | | |
| ಮೀಸು | ೩೭ | | |
| ಸಣಬಿನ ವಸ್ತುಗಳು | ೩೭ | ಒಟ್ಟೆಗಳು ಗಜ | ೨೨,೪೩,೨೮೦ |
| | | ಸೂಲು ಇತ್ಯಾದಿ ಪೌಂಡು | ೬,೫೯,೯೮೦ |
| ಹಣ್ಣುಗಳು, ಕಾಯಿಪಲ್ಯಗಳು | ೨೦೨ | | |
| ಕುರ್ಚಿ, ಮೇಜು ಮುಂ. | ೩೧ | | |
| ಗಾಜಿನ ಪದಾರ್ಥಗಳು | ೨೪೮ | ರೇಕು, ಚ. ಅಡಿ | ೨,೩೮,೨೫,೩೯೯ |
| ದವಸಧಾನ್ಯಹಿಟ್ಟು | ೨೩೧ | ಟನ್ನು | ೧,೬೦,೮೯೭ |
| ಅಂಟು, ರಾಳ ಇತ್ಯಾದಿ | ೪೦ | ಹಂ. ವೇ. | ೧,೮೯,೮೭೧ |
| ಚಿಲ್ಲರೆ ಸರುಕು | ೧೨೭ | — | — |
| ಕಬ್ಬಿಣದ ಸಾಮಾನು | ೫೨೫ | — | — |
| ಚರ್ಮಗಳು | ೩೫ | ಟನ್ನುಗಳು | ೨,೧೮೯ |
| ಕುದುರೆಗಳು | ೩೭ | ಸಂಖ್ಯೆ | ೪,೦೦೧ |
| ಯಂತ್ರೋಪಕರಣಗಳು ಇ. | ೪೪೭ | — | — |
| ದಂತದ ಸಾಮಾನುಗಳು | ೨೧ | ಪೌಂಡುಗಳು | ೨,೭೬,೫೨೬ |
| ಆಭರಣಗಳು | ೧೫೨ | — | — |
| ಗೋಣಿಸಾರಿನ ಪದಾರ್ಥಗಳು | ೨೪ | ಚೀಲದಸಂಖ್ಯೆ | ೬೧,೩೧,೧೫೬ |
| — | — | ಕ್ಯಾನ್‌ವಾಸ್ ಗಜ | ೨,೮೫,೦೨೨ |
| ಚರ್ಮದ ಸಾಮಾನು | ೫೭ | — | — |
| ಮಾದಕ ದ್ರವ್ಯಗಳು | ೩೬೭ | ಗ್ಯಾಲನ್ | ೭೧,೧೮,೪೫೮ |
| ಯಂತ್ರಗಳು | ೧,೫೯೪ | — | — |
| ಬೆಂಕಿಯ ಕಡ್ಡಿ | ೩೯ | — | — |

| | | | |
|---|---|---|---|
| ಲೋಹ: ಕಬ್ಬಿಣ ಮತ್ತು ಉಕ್ಕು | ೨,೧೪೪ | ಟನ್ನುಗಳು | ೧೧,೯೭,೨೬೧ |
| ಹಿತ್ತಾಳೆ ತಾಮ್ರ ಇತ್ಯಾದಿ | ೬೯೫ | ಹಂ. ವೇ. | ೨೫,೮೮,೧೯೬ |
| ಮೋಟಾರುಕಾರುಗಳು ಇ. | ೬೧೭ | ಸಂಖ್ಯೆ | ೨೫,೯೫೦ |
| ಎಣ್ಣೆಗಳು | ೧,೧೦೮ | ಗ್ಯಾಲನ್ | ೨೩,೪೬೭೩೪೨೨ |
| ಬಣ್ಣಗಳು ಮುಂತಾದುವು | ೧೫೫ | — | — |
| ಕಾಗದ, ರಟ್ಟು ಇತ್ಯಾದಿ | ೩೪೧ | ಹಂ. ವೇ. | ೩ ೯೯,೩೫೦ |
| ಪಿಂಗಾಣಿ | ೮೦ | — | — |
| ಆಹಾರ ಪದಾರ್ಥಗಳು | ೬೪೧ | — | — |
| ರೈಲ್ವೆ ಸಾಮಾನು | ೪೭೭ | — | — |
| ರಬ್ಬರು ಸಾಮಾನು | ೨೭೧ | | |
| ಉಪ್ಪು | ೧೭೫ | ಟನ್ನುಗಳು | ೫,೯೬,೨೫೦ |
| ಬೀಜಗಳು | ೧೮ | ಹಂ. ವೇ. | ೮೫,೯೮೦ |
| ಹಡಗುಗಳು | ೧೪೫ | ಪೌಂಡುಗಳು | ೨೩,೫೬,೨೨೫ |
| ರೇಷ್ಮೆ ಕಚ್ಚಾ ತಯಾರಿಸಿದುದು | ೩೬೦ | ಒಟ್ಟು. ಗಜ.<br>ನೂಲು ಪೌಂ. | ೨೩,೭೪೦೬೮೭<br>೧೪,೪೦,೬೮೩ |
| ಸಾಬೂನು | ೧೬೧ | ಹಂ. ವೇ. | ೪ ೨೨,೪೮೯ |
| ಸಂಬಾರ ವಸ್ತುಗಳು | ೨೫೮ | ,, | ೧೧,೧೮,೭೩೪ |
| ಬರವಣಿಗೆಯ ಸಾಮಾನು | ೯೨ | — | — |
| ಸಕ್ಕರೆ | ೧,೪೯೧ | ಟನ್ನುಗಳು | ೮,೨೨,೯೦೨ |
| ಕೊಬ್ಬು | ೨೬ | ಹಂ. ವೇ. | ೯೩,೫೧೪ |
| ಟೀ | ೬೯ | ಪೌಂಡು | ೭೯,೯೩,೯೩೩ |
| ಟೀಗೆ ಬೇಕಾದ ವಸ್ತುಗಳು | ೭೨ | | |
| ಹೊಗೆಸೊಪ್ಪು | ೨೯೧ | ,, | ೯೯,೨೮,೦೪೫ |
| ಸೌಂದರ್ಯ ಸಾಧನಗಳು | ೬೨ | | |
| ಆಟದ ಸಾಮಾನುಗಳು | ೬೪ | | |
| ಕೊಡೆಗಳು | ೬೨ | ಸಂಖ್ಯೆ | ೨,೯೪,೦೩೬ |

| | | | |
|---|---|---|---|
| ಮರ ಮತ್ತು ಚೌಬೀನೆ- | ೮೧ | ಘನ ಟನ್ನು | ೨೪,೭೪೯ |
| ಉಣ್ಣೆ, ಕಚ್ಚಾ | ೪೫ | ಪೌಂಡು | ೫೭,೮೧,೯೯೬ |
| ,, ಸಾಮಾನು | ೪೯೨ | ಬಟ್ಟೆ-ಗಜ | ೧,೮೬,೭೬,೮೫೫ |
| | | ಶಾಲು ಸಂಖ್ಯೆ. | ೧೦,೮೮,೯೩೯ |
| ಕಂಬಳಿಗಳು | | ಪೌಂಡು | ೪೯, ೬೨೯೧೮ |
| ಇತರ | ೧,೪೧೩ | | |
| | ೨೪,೯೮೫ | | |

೩ ಮರಳಿರಫ್ತಾದುವು. (ಇಂಡಿಯಾಕ್ಕೆ ಬಂದು ಇತರ ದೇಶ ಗಳಿಗೆ ಇಲ್ಲಿಂದ ರಫ್ತಾದುವು)

| ವಸ್ತುಗಳು | ಲಕ್ಷ ರೂ. ನಲ್ಲಿ ಬೆಲೆ | ರೂಪ | ಪ್ರಮಾಣ |
|---|---|---|---|
| ಅಲಂಕಾರ ವಸ್ತುಗಳು | ೧೩ | | |
| ಅರಳೆ: ವಸ್ತುಗಳು | ೧೨೧ | ಗಜ | ೩,೩೭,೯೧,೨೧೭ |
| : ನೂಲು ಹುರಿ | ೧೫ | ಪೌಂಡು | ೧೩,೮೩,೫೬೪ |
| ಹಣ್ಣು, ಕಾಯಿ, ಪಲ್ಯೆಗಳು | ೨೦ | — | — |
| ಅಂಟು, ವಜ್ರ, ರಾಳ ಇತ್ಯಾದಿ | ೨೫ | ಹಂ. ವೇ. | ೬೦,೦೪೧ |
| ಕಬ್ಬಿಣದ ಸಾಮಾನು | ೨೬ | — | — |
| ಲೋಹಗಳು | ೨೬ | ಟನ್ನುಗಳು | ೩೬,೮೦೮ |
| ಆಹಾರಪದಾರ್ಥಗಳು | ೩ | ಹಂ. ವೇ. | ೪,೮೫೮ |
| ಸಂಬಾರ ವಸ್ತುಗಳು | ೩ | ,, | ೭,೮೪೬ |
| ಸಕ್ಕರೆ | ೫೫ | ಟನ್ನುಗಳು | ೧೯,೮೧೨ |
| ಉಣ್ಣೆ: ಕಚ್ಚಾ | ೮೯ | ಪೌಂಡು | ೧೨,೬,೯೯,೫೯೨ |
| ಇತರ | ೫೫೮ | | |
| | ೯೫೪ | | |

## ೪ ವ್ಯಾಸಾರಸಮತ್ವ (ಲಕ್ಷ ರೂಪಾಯಿ ಪ್ರಮಾಣದಲ್ಲಿ

ಭಾರತೀಯ ವಸ್ತುಗಳ ರಫ್ತು ೩೧,೯೧೫
ಪರದೇಶದ ಪದಾರ್ಥಗಳ ಆಮದನ್ನು ತೆಗೆಯಲಾಗಿ ೨,೪೬,೭೩
ಪುನಃ ರಫ್ತು ಮಾಡಿದುದನ್ನು ತೆಗೆಯಲಾಗಿ ೯೫೪
೨೩,೭೧೯

ಹಿಂದೂದೇಶಕ್ಕೆ ಅನುಕೂಲವಾಗಿ ನಡೆದ ವ್ಯಾಪಾರದ ಸ್ಥಿತಿ ೮೧,೯೬
ಚಿನ್ನ, ಬೆಳ್ಳಿ, ಕಾಗದದ ನಾಣ್ಯಗಳ ಆಮದುಪಿನಾ ೩೨,೧೯

ನಿಕರವಾಗಿ ಹಿಂದೂದೇಶಕ್ಕೆ ಲಾಭಕಾರಿಯಾದ ವ್ಯಾಪಾರದ ಸ್ಥಿತಿ ೪೯,೭೭
ಗಮನಿಸಬೇಕಾದುದು:—

ಸಂಸ್ಥಾನದ ರೈಲ್ವೆಗಳಿಂದ ಆಮದಾಗಿರುವ ವಸ್ತುಗಳು ಈ ಆಮದಿನ ಲೆಕ್ಕದಲ್ಲಿ ಸೇರಿಲ್ಲ.
ನಿವ್ವಳದಲ್ಲಿ ಸ್ವಲ್ಪ ಭಾಗವನ್ನು ಬ್ರಿಟಿಷ್ ಸರಕಾರದವರು ತೆಗೆದುಕೊಂಡಿರುವರು.
ಕೌನ್ಸಿಲು ಬಿಲ್ಲುಗಳು ಇತ್ಯಾದಿ ಇಂಗ್ಲೆಂಡು ಮುಂತಾದವುಗಳಿಗೆ
೩೭,೭೭
ಸರಕಾರದ ಆಧಾ... ಮೇಲೆ ಕಳುಹಿಸಿರುವ ಹುಂಡಿಗಳಿಗೆ ಬಂದ ಬಡ್ಡಿ
೩೫

೩೮,೧೨

## ಪ್ರಮುಖ ಪರದೇಶಗಳೊಡನೆ ವ್ಯಾಪಾರ

| ರಾಷ್ಟ್ರಗಳು | ಲಕ್ಷ ರೂಪಾಯಿ ಪ್ರಮಾಣದಲ್ಲಿ ರಫ್ತು | ಲಕ್ಷ ರೂಪಾಯಿ ಪ್ರಮಾಣದಲ್ಲಿ ಆಮದು |
|---|---|---|
| ಇಂಗ್ಲೆಂಡು | ೭೮,೯೧ | ೧,೧೯,೨೭ |
| ಸಂಯುಕ್ತ ಸಂಸ್ಥಾನ | ೩೫,೯೦ | ೨೦,೪೪ |
| ಜರ್ಮನಿ | ೩೦,೬೮ | ೧೫,೩೫ |
| ಜಪಾನು | ೨೯,೦೦ | ೧೭,೯೦ |
| ಫ್ರಾನ್ಸು | ೧೫,೭೭ | ೪,೩೧ |

| | | |
|---|---|---|
| ಸಿಂಹಳ | ೧೫,೧೦ | ೧,೯೧ |
| ಇಟಲಿ | ೧೨,೬೮ | ೬,೭೮ |
| ಬೆಲ್ಜಿಯಂ | ೧೦,೮೫ | ೭,೪೯ |
| ದಕ್ಷಿಣ ಅಮೇರಿಕ | ೧೦,೬೭ | ೮,೩೩ |
| | ೨೩೯,೬೪ | ೨೦೧,೭೮ |
| ಇತರ | ೭೯,೫೧ | ೪೮,೦೭ |
| | ರೂ. ೩,೧೯, ೧೫ ಲಕ್ಷ | ರೂ. ೨,೪೯,೮೫ ಲಕ್ಷ |

## ಪರಿಶಿಷ್ಟ 'ಈ'

### ೧೯೨೭–೨೮ರ ಲೆಕ್ಕ

(೧ ರೂಪಾಯಿಗೆ—೧ ಷಿಲಿಂಗು ೬ ಪೇನಸು ಅಥವಾ ಸಂಯುಕ್ತ ಸಂಸ್ಥಾನದ ೩೬ ಸೆಂಟುಗಳು)

### ೧. ನಿಷ್ಫಳ ಪ್ರಭುತ್ವದ ವೆಚ್ಚ

| | | |
|---|---|---|
| ಎರವಲಾಗಿ ತೆಗೆದುಕೊಂಡ ಉದ್ಯೋಗಗಳ ಬಾಬು | ೧೮,೪೯,೪೯,೭೩೬ | ೧೩.೩% |
| ಸೈನ್ಯದ ಬಾಬು | ೫೪,೭೯,೪೫,೫೮೧ | ೩೯.೪% |
| ದೇಶದ ಆಡಳಿತದ ಬಾಬು | ೫೮,೩೦,೯೧,೬೧೧ | ೪೧.೯% |
| ಇತರ ಬಾಬುಗಳಿಗಾಗಿ | ೭,೫೫,೦೭,೯೮೫ | ೫.೪% |
| | ರೂ. ೧೩೯,೧೪,೯೪೯೧೩ | ೧೦೦.೦೦ |

**ದೇಶದ ಆಡಳಿತದ ವಿವರಗಳು:—**

| | ಲಕ್ಷ ಪ್ರಮಾಣದಲ್ಲಿ | ನೂರಕ್ಕೆ |
|---|---|---|
| ಸಾಮಾನ್ಯ ಆಡಳಿತ | ೧೨,೯೦ | ೯.೨೭ |

| | | |
|---|---|---|
| ಲೆಕ್ಕತನಿಖೆ | ೮೮ | ೦.೬೩ |
| ನ್ಯಾಯಾಂಗ | ೪,೭೬ | ೩.೪೨ |
| ತುರಂಗ | ೨,೧೧ | ೧.೫೨ |
| ಪೋಲೀಸು | ೧೧,೮೦ | ೮.೪೮ |
| ರೇವುಗಳು | ೨೪ | ೦.೧೭ |
| ಧಾರ್ಮಿಕ | ೩೨ | ೦.೨೩ |
| ರಾಜಕೀಯ | ೧,೫೮ | ೧.೧೪ |
| ಗಡಿನಾಡಿನ ಬಂದೋಬಸ್ತು | ೨,೫೦ | ೧ ೮೦ |
| ಶಾಸ್ತ್ರೀಯ ವಿಜ್ಞಾನ | ೯೯ | ೦.೭೨ |
| ಶಿಕ್ಷಣ | ೧೧,೮೮ | ೮.೫೪ |
| ವೈದ್ಯ | ೩,೫೩ | ೨.೫೪ |
| ಆರೋಗ್ಯ | ೧,೭೨ | ೧.೨೩ |
| ವ್ಯವಸಾಯ | ೨,೦೯ | ೧.೫೦ |
| ಕೈಗಾರಿಕೆ | ೬೭ | ೦.೪೮ |
| ವಿಮಾನ ಇತ್ಯಾದಿ | ೩೦ | ೦.೨೧ |
| ಉಗ್ರಾಣ | ೩ | ೦.೦೨ |
| | ೫೮,೩೦ | ೪೧.೯೦ |

## ೨. ನಿವ್ವಳ ಆದಾಯ

| | ವಸೂಲಾತಿಯ ವೆಚ್ಚ | ನಿವ್ವಳ ಆದಾಯ |
|---|---|---|
| ಸುಂಕ | ೧.೮% | ೪೭,೩೬,೬೦,೩೩೮ |
| ಆದಾಯ ತೆರಿಗೆ | ೪.೩% | ೧೪,೭೭,೦೭,೮೬೭ |
| ಉಪ್ಪು | ೧೯.೨ % | ೫,೩೬ ೬೬,೮೯೮ |
| ಅಫೀಮು | ೨೨.೦ % | ೩,೦೭,೫೧,೪೨೯ |
| ಜಮೀನು ಕಂದಾಯ | ೧೧.೯ % | ೩೧,೪೩,೯೦,೩೪೫ |
| ಮಾದಕದ್ರವ್ಯಗಳ ತೆರಿಗೆ | —— | ೧೭,೫೯,೩೯,೩೦೮ |

| | |
|---|---|
| ಸ್ಟಾಂಪುಗಳು | ೧೩,೨೮,೨೪,೯೩೩ |
| ಅರಣ್ಯ | ೨ ೬೯,೦೮೧೯೦ |
| ರಜಿಸ್ಟ್ರೇಷನ್ | ೭೫.೮೬,೬೧೬ |
| ಕಪ್ಪ-ಕಾಣಿಕೆಗಳು | ೮೩ ೯೭,೨೮೫ |
| ಸಿಗದಿಯಾದ ತೆರಿಗೆಗಳು | ೪೦,೩೧,೨೭೫ |
| | ೧,೩೭,೫೮,೬೪,೪೮೪ |

| | ಜಮಾ | ಖರ್ಚು | ಉಳಿತಾಯ |
|---|---|---|---|
| ರೈಲುಗಳಿಂದ | ೩೮,೭೨,೨೮,೯೪೪ | ೩೨,೪೦,೩೫,೩೮೧ | ೬,೩೧,೯೩.೫೬೩ |
| ವ್ಯವಸಾಯ | ೨,೮೩,೯೯,೭೩೯ | ೧,೩೩,೯೦,೭೦೦ | ೧,೫೦,೦೯,೦೩೯ |
| ಬಡ್ಡಿ | — | — | ೫.೯೭ ೬೭,೬೮೬ |
| ನಾಣ್ಯ–ನೋಟು | ೨,೭೭,೪೬,೧೧೬ | ೭೦,೧೧,೪೧೩ | ೨,೦೭,೩೪,೭೦೩ |
| ವಿಶೇಷ | ೩,೬೧,೯೮,೫೪೩ | ೪೪,೮೫,೯೧೬ | ೩,೧೭,೧೨,೬೨೭ |
| | | | ೧,೫೬,೬೨,೮೨,೧೦೨ |
| ಅಂಚೆ-ತಂತಿ ವಿನಾ | ೩೧,೪೫,೬೬೧ | ೬೦,೪೫,೬೮೯ | ೨೯,೦೦,೦೨೮ |
| | | | ರೂ. ೧,೫೬,೩೩,೮೨,೦೭೪ |

## ೩. ಪ್ರಭುತ್ವದ ಸಾಲ—ಉತ್ಪತ್ತಿಕಾರಕವಾದುದು

| | | ಲಕ್ಷ ಪ್ರಮಾಣದಲ್ಲಿ |
|---|---|---|
| ರೈಲು | ೩೯,೭೧೨ ಮೈಲು | ೬ ೬೮,೭೪ |
| ವ್ಯವಸಾಯ: ಮುಖ್ಯಸಾಲಾ | ೨೨,೪೦೨ ,, | ೧,೧೧,೪೪ |
| ,, ಹಂಚಿಕೆ | ೪೪,೫೮೭ ,, | ...... |
| ಅಂಚೆ ಮತ್ತು ತಂತಿ | .. | ೧೪,೬೬ |
| ಅರಣ್ಯ | ೧೧,೦೩,೫೭೯ ಚದರ ಮೈಲು | ೧,೪೭ |
| ಉಪ್ಪು | .. | ೮೬ |
| ವಿಶಾಖ ಪಟ್ಟಣದ ಬಂದರ | | ೧೨೬ |
| ಹೈಡ್ರೋ-ಎಲೆಕ್ಟ್ರಿಕ್ ರಚನೆ | | ೭೦ |

| | |
|---|---|
| ಬೊಂಬಾಯಿ ನಗರದ ಅಭಿವೃದ್ಧಿ | ೪೧೬ |
| ಸರಕಾರದ ವ್ಯಾಪಾರ ಕೇಂದ್ರಗಳಿಂದ | ೧,೨೨ |
| | ——— |
| | ರೂ. ೮,೦೫,೦೬ ಲಕ್ಷ |

### ೪. ಸುಂಕದ ಆದಾಯ—ವಿವರಗಳು

| ಸಮುದ್ರದ ಆಮದು ಬಾಬಿನಲ್ಲಿ ಬಂದ ಸುಂಕ | ಸಾವಿರ ರೂ. ಪ್ರ. ದಲ್ಲಿ |
|---|---|
| ಆಯುಧ, ಯುದ್ಧ ಸಾಮಗ್ರಿಗಳು | ೨೩೧ |
| ಇದ್ದಿಲು ಇತ್ಯಾದಿ | ೧೬೦ |
| ತಗಡು | ೮೨೦ |
| ಮಾದಕದ್ರವ್ಯಗಳು | ೭,೨೫,೯ |
| ಬೆಂಕಿಯ ಪೆಟ್ಟಿಗೆ ಇತ್ಯಾದಿ | ೫೩,೨೭ |
| ಅಫೀಮು | ೩ |
| ಲೋಹಮಯ ಎಣ್ಣೆಗಳು | ೧,೨೮ ೯೭ |
| ಸಕ್ಕರೆ | ೬ ೫೧ ೧೯ |
| ಹೊಗೆ ಸೊಪ್ಪು | ೭,೧೨,೧೩ |
| ರೇಷ್ಮೆ (ಸಕಲಿ) ದಾರ | ೨ ೯೧ |
| ಹತ್ತಿಯ: ನೂಲು | ೪೧,೪೫ |
| ಬಟ್ಟೆ | ೬,೭೫,೧೨ |
| ರೇಷ್ಮೆಯ ಮಿಶ್ರ ವಸ್ತ್ರಗಳು | ೨,೭೬ |
| ಸಿಮೆಂಟು | ೯,೯೬ |
| ಮುದ್ರಣ ಮಸಿ | ೩೨ |
| ಮೋಟಾರು ಕಾರುಗಳೂ ಬೈಸಿಕಲ್ಲುಗಳೂ | ೮೯,೫೭ |

### ನೂರಕ್ಕೆ ೭ತ್ತಯಂತೆ ಸುಂಕ ಹಾಕಿದುವು

| | |
|---|---|
| ಯಂತ್ರಗಳು | ೭೧,೯೦ |
| ರೈಲ್ವೆ ಇಂಜನುಗಳು | ೬೮ |
| ಇತರ ಪದಾರ್ಥಗಳು | ೫೩ |

### ನೂರಕ್ಕೆ ೧೦ರಂತೆ ಸುಂಕ ಹಾಕಿದುವು

| | |
|---|---|
| ಕಬ್ಬಿಣ-ಉಕ್ಕು | ೫೧,೦೯ |
| ರೈಲ್ವೆ ಮುಟ್ಟು | ೭೮,೯೪ |
| ಇತರ ಸಾಮಾನು | ೧,೦೨ |

### ನೂರಕ್ಕೆ ೧೫ರಂತೆ ಸುಂಕ ಹಾಕಿದುವು

| | |
|---|---|
| ಆಹಾರ ಪಾನೀಯ ವಸ್ತುಗಳು | ೧,೮೭,೦೯ |
| ಕಚ್ಚಾ ಪದಾರ್ಥಗಳು | ೨೮,೮೫ |
| ಕತ್ತಿ, ಚೂರಿ ಮೊದಲಾದ ಕಬ್ಬಿಣದ ವಸ್ತುಗಳು | ೭,೧೯,೭೮ |
| ನೂಲು ಮತ್ತು ಬಟ್ಟೆಗಳು (ಹತ್ತಿ, ರೇಷ್ಮೆಯುವಲ್ಲದುವು) | ೧,೮೭,೮೮ |
| ರಬ್ಬರು ಟೈರು, ಟ್ಯೂಬುಗಳು | ೭೯,೬೦ |
| ಇತರ ಚಿಲ್ಲರೆಯ ವಸ್ತುಗಳು | ೪,೨೯,೭೬ |

### ನೂರಕ್ಕೆ ೩೦ರಂತೆ ಸುಂಕ ಹಾಕಿದುವು

| | |
|---|---|
| ರೇಷ್ಮೆಯ ಬಟ್ಟೆಗಳು | ೮೮,೭೭ |
| ಇತರ | ೯೬,೦೭ |

### ವಿಶೇಷ ಸುಂಕ ವಿಧಿಸಿದವು (ಆಂಗ್ಲೇಯ–ಆಂಗ್ಲೇಯೇತರ ತಯಾರಿಯ ವಿಭೇದದ ಆಧಾರದಿಂದ ವಿಧಿಸಿದುವು)

| | |
|---|---|
| ಕಬ್ಬಿಣ ಮತ್ತು ಉಕ್ಕು | |
| ಬ್ರಿಟಿಷ್ ತಯಾರಿ | ೪೪,೨೩ |
| ಬ್ರಿಟಿಷೇತರ ತಯಾರಿಗೆ ಹೆಚ್ಚಿನ ತೆರಿಗೆಯಿಂದ | ೧,೦೮,೪೭ |
| ,, ಹೆಚ್ಚಿನ ತೆರಿಗೆಯಿಲ್ಲದೆ | ೧,೨೧,೪೧ |
| ಕಾಗದ ಮತ್ತು ಲೇಖನ ಸಾಮಗ್ರಿ | ೭೬,೯೭ |
| ಸರಕಾರದ ರೈಲಿನ ಎಲ್ಲಾ ಸಾಮಗ್ರಿಗಳು | ೭೨,೯೩ |
| ಇತರ | ೫೦,೫೪ |
| ಆಮದಿನಿಂದ ಬಂದ ಒಟ್ಟು ಕಂದಾಯ | ೪೦,೪೬,೧೨ |

## ಸಮುದ್ರ ಸುಂಕ—ರಫ್ತಿನಿಂದ ಬಂದುದು

| | | ಸಾವಿರ ರೂ. ಪ್ರಮಾಣದಲ್ಲಿ |
|---|---|---|
| ಚರ್ಮಗಳು | | ೩೭,೩೩ |
| ಸಣಬು : ಕಚ್ಚಾ | | ೨,೧೮,೬೯ |
| ತಯಾರಿಸಿದುದು | | ೨,೪೧,೨೮ |
| ಅಕ್ಕಿ | | ೧,೦೬,೫೪ |
| ಚಹಾ | | ೧,೩೩ |
| ಸರಕಾರದ ಉಗ್ರಾಣ | | ೩ |
| ರಫ್ತಿನಿಂದ ಬಂದ ಒಟ್ಟು ಆದಾಯ | | ೬,೦೫,೨೦ |
| ಸಮುದ್ರ ಸುಂಕ—ಇತರ | | ೧೪,೪೨ |
| ಭೂಮಾರ್ಗದ ಸುಂಕ | | ೨೭,೮೦ |
| ಮಾದಕ ಪದಾರ್ಥಗಳ ಸುಂಕ | | |
| ಪೆಟ್ರೋಲು | ೧,೨೭,೨೩ | |
| ಸೀಮೆ ಎಣ್ಣೆ | ೯೭,೧೮ | ೨,೧೮,೪೧ |
| ಗಡಂಗುಗಳ ಬಾಡಿಗೆ ಇತ್ಯಾದಿ | | ೪೨ |
| ಚಿಲ್ಲರೆ | | ೫೨೧ |
| | | ೨,೬೬,೩೧ |
| ಆಮದಿನಿಂದ ಆದಾಯ | | ೪೦,೪೬,೧೨ |
| ರಫ್ತಿನಿಂದ ,, | | ೬,೦೫,೨೦ |
| | | ೪,೯೧೭,೬೮ |
| ಮರಳಿ ವಾಪಸುಮಾಡಿದ್ದು ವಿನಾ | | ೯೬,೨೭ |
| | | ೪೮,೨೧,೪೧ |
| ಕೂಲಿ ವಿನಾ | | ೮೪,೮೧ |
| ಸುಂಕದಿಂದ ನಿವ್ವಳ ಆದಾಯ (ಸಾವಿರ ರೂ. ಪ್ರ. ದಲ್ಲಿ) | | ೪೭,೩೬,೬೦ |

## ೫. ರಕ್ಷಣೆಗಾಗಿ ಆಗುವ ವೆಚ್ಚ
## ೪೧ ರಾಷ್ಟ್ರಗಳ ತಾರತಮ್ಯದ ಪರಿಶೀಲನಾ ವಿಮರ್ಶೆ

ಶ್ರೀ ಆರ್ನಾಲ್ಡ್, ಜೆ. ತಾಯಂಬೀರವರು ಬರೆದಿರುವ 'ಅಂತರ್‌ರಾಜಕೀಯ ವಿಚಾರಸರಣಿಯ ವಿಮರ್ಶೆ' ಯೆಂಬ ಪುಸ್ತಕದಲ್ಲಿರುವುದನ್ನು ರಾಷ್ಟ್ರಗಳ ಕ್ರಮವನ್ನೂ ಕೆಲವು ವಿವರಗಳನ್ನೂ ಬಿಟ್ಟು, ೧೯೩೦ನೆಯ ಏಪ್ರಿಲ್ ೧೭ನೆಯ ತಾರೀಖಿನ 'ನ್ಯೂ ಇಂಡಿಯಾ' ಎಂಬ ಪತ್ರಿಕೆಯಲ್ಲಿ ಬರೆದಿರುವುದನ್ನು ಈ ಕೆಳಗೆ ಕಂಡ ಪಟ್ಟಿಯಲ್ಲಿ ಕೊಟ್ಟಿದೆ. ಈ ಪಟ್ಟಿಯಲ್ಲಿ ಕೊಟ್ಟಿರುವ ಅಂಕಿ ಅಂಶಗಳು ಅಂತರ್ ರಾಜಕೀಯ ಸಮಿತಿಯ 'ವಾರ್ಷಿಕ ವರದಿ' ಯ ಪುಸ್ತಕದಲ್ಲಿಂದ ತೆಗೆದು ಆರಿಸಲಾಗಿದೆ.

| ರಾಷ್ಟ್ರ | ವರುಷ | ಪೌಂ. ಬೆಲೆಯಲ್ಲಿ | ವೆಚ್ಚ % |
|---|---|---|---|
| ಹಿಂದೂದೇಶ (ಎರವಾಗಿತೆಗೆದುಕೊಂಡ ಉದ್ಯೋಗಗಳ ವಿನಾ | ೧೯೨೭–೨೮ | ೪೨,೬೧೭,೫೩೫ | ೪೫.೨೯ |
| ಚೀನಾ | ೧೯೨೭–೨೮ | ೨೦,೫೯೨,೧೮೮ | ೪೩.೧೩ |
| ಪೋಲೆಂಡ (ಪೆನ್ಸನು ಮತ್ತು ಎರವಲು ಉದ್ಯೋಗದ ವಿನಾ | ,, | ೧೩,೮೪೮,೮೮೮ | ೩೧.೫೮ |
| ಪೋರ್ಚುಗಲ್ (ಪೆನ್ಸನು ಮತ್ತು ಕೆಲವು ಆಡಳಿತ ವೆಚ್ಚ ಸೇರಿ | ೧೯೨೬–೨೭ | ೪,೪೩೭,೧೪೬ | ೨೭.೩೯ |
| ಜಪಾನ | ೧೯೨೭–೨೮ | ೪೭.೨೩೫,೯೬೯ | ೨೬.೫೭ |
| ಸ್ಪೇನ | ೧೯೨೭ | ೨೫,೫೮೯,೭೭೦ | ೨೫.೯೭ |
| ಸ್ವಿಟ್ಜರಲೆಂಡ | ೧೯೨೭–೨೮ | ೩,೩೮೩,೭೫೮ | ೨೫.೮೩ |
| ಲಟ್ವಿಯಾ | ,, | ೧,೬೨೧,೩೦೧ | ೨೫.೧೨ |
| ಇಟಲಿ | ,, | ೪೫,೮೯೫,೭೪೦ | ೨೩.೪೬ |
| ಎಸ್ತೋನಿಯಾ | ೧೯೨೭–೨೮ | ೧,೦೨೨,೮೮೦ | ೨೩.೪೬ |
| ಚಿಲೀ | ೧೯೨೭ | ೫,೩೫೬,೬೨೪ | ೨೩.೩೨ |
| ಮೆಕ್ಸಿಕೊ (ಪೆನ್ಸನು ವಿನಾ) | ,, | ೭,೫೩೬,೨೭೧ | ೨೩.೦೨ |
| ಗ್ರೀಸ್ (ಪೆನ್ಸನು ಮತ್ತು ಎರವಲು ಉದ್ಯೋಗ ವಿನಾ) | ೧೯೨೭–೨೮ | ೫,೦೧೭,೭೮೪ | ೨೧.೯೨ |

| | | | | |
|---|---|---|---|---|
| ಫ್ರಾನ್ಸ | ಎ. ಉ. ಏ. | ,, | ೬೩,೩೬೮,೬೩೫ | ೧೯.೭೫ |
| ಜಗಸ್ಲೋವಿಯಾ | ,, | ೧೯೨೬-೨೭ | -೮,೭೪೨,೬೫೩ | ೧೯.೨೯ |
| ಲಿಥೂನಿಯಾ | | ೧೯೨೭ | ೮,೦೧,೮೨೯ | ೧೯.೧೫ |
| ಬೊಲಿವಿಯಾ | | ೧೯೨೫ | ೫೯೦,೬೧೨ | ೧೯.೦೩ |
| ಸ್ವೀಡನ್ | | ೧೯೨೭-೨೮ | ೭,೫೯೭,೦೨೭ | ೧೮.೭೯ |
| ಪೇರು | | ೧೯೨೭ | ೧,೪೩೩,೭೬೬ | ೧೮.೬೩ |
| ಆರ್ಜಂಟೇಸಿಯಾ (ಪೆನ್ಸನು ಮತ್ತು ಎರುವಲು ಉ.ಏ. | | ೧೯೨೬ | ೨೧೫೯೬,೫೪೫ | ೧೮.೧೯ |
| ಬಲ್ಗೇರಿಯಾ | | ೧೯೨೭-೨೮ | ೧,೯೩೦,೦೮೦ | ೧೭.೭೯ |
| ಬ್ರಜೀಲ್ (ಎ. ಉ. ಏ. | | ೧೯೨೭ | ೭,೭೨೩,೩೭೩, | ೧೭.೫೨ |
| ಜೆಕಸ್ಲೊವಿಯಾ ,, | | ೧೯೨೭ | ೧೦,೨೭೪,೩೯೦ | ೧೭.೩೬ |
| ಉರುಗ್ವೇ | | ೧೯೨೫-೨೬ | ೧,೫೪೪,೨೪೮ | ೧೭.೦೭ |
| ಸಂಯುಕ್ತಸಂಸ್ಥಾನ ( ,, ) | | ೧೯೨೭-೨೮ | ೧,೨೦,೧೭೮,೧೩೦ | ೧೬.೦೯ |
| ಸೋವಿಯೇಟ್‌ರಷ್ಯಾ | | ೧೯೨೫-೨೬ | ೬೮,೪೨೭,೦೫೫ | ೧೬.೦೧ |
| ಫಿನಲೆಂಡ | (,,) | ೧೯೨೭ | ೩,೧೧೮,೦೮೨ | ೧೫.೯೧ |
| ಈಕೆವೇಡರ್ | (,,) | ೧೯೨೭ | ೩೧೪,೦೨೬ | ೧೫.೮೮ |
| ಕ್ಯೂಬಾ | (,,) | ೧೯೨೭-೨೮ | ೨,೫೩೭,೦೫೨ | ೧೫.೦೫ |
| * ಗ್ರೇಟ್‌ಬ್ರಿಟನ್ ಮತ್ತು ಉತ್ತರ ಐರ್ಲಂಡು | | ೧೯೨೭-೨೮ | (೨೦,೬೯೫,೦೦೦ | ೧೪.೭೫ |
| ನೆದರಲ್ಯಾಂಡ್ಸ (ಎ.ಉ.ಏ.) | | ೧೯೨೭ | ೭,೮೪೮,೩೦೯ | ೧೩.೦೬ |
| ಡೆನ್ಮಾರ್ಕ | ,, | ೧೯೨೭-೨೮ | ೨,೭೨೫,೨೧೯ | ೧೨.೧೯ |
| ನಾರ್ವೆ | ,, | ,, | ೨,೨೧೪,೧೩೭ | ೧೦.೩೧ |
| ಹಂಗರಿ | ,, | ೧೯೨೬-೨೭ | ೩,೯೮೯,೯೩೫ | ೯.೭ |
| * ಐರಿಷ್‌ಫ್ರಿಸ್ಟೇಟ್— | | ೧೯೨೭-೨೮ | ೨,೪೮೦,೦೦೦ | ೭.೬೯ |
| ಬೆಲ್ಜಿಯಂ | ,, | ೧೯೨೭ | ೩,೪೮೦,೦೮೦ | ೭.೬೭ |
| ಜರ್ಮನಿ | ,, | ೧೯೨೭-೨೮ | ೩೩,೧೩೭,೩೮೪ | ೭.೧೬ |
| * ಆಸ್ಟ್ರೇಲಿಯ | | ೧೯೨೬-೨೭ | ೫,೯೫೬,೦೦೦ | ೬.೫೨ |

| | | | |
|---|---|---|---|
| ಆಸ್ಟ್ರಿಯ | ೧೯೩೭ | ೩,೨೧೮,೧೮೧ | ೬.೨೭ |
| * ನ್ಯೂಜಿಲೆಂಡ ,, | ೧೯೩೭-೩೮ | ೯೫೮,೨೩೧ | ೨.೯೧ |
| * ಯುನಿಯನ್ ಆಫ್ ದಕ್ಷಿಣ ,, ಆಫ್ರಿಕಾ | ೧೯೩೭-೩೮ | ೧,೧೩೫,೯೦೦ | ೨.೧೬ |

ಈ ಪಟ್ಟಿಯಲ್ಲಿ ರಾಷ್ಟ್ರ ರಕ್ಷಣೆಯ ವ್ಯವಸ್ಥೆಯಲ್ಲಿ ಹಿಂದೂದೇಶವೇ ಹೆಚ್ಚು ವೆಚ್ಚ ಮಾಡುವುದರಲ್ಲಿ ಮೊದಲನೆಯದಾಗಿ ಬ್ರಿಟಿಷ್ ಚಕ್ರಾಧಿಪತ್ಯದ ಇತರ ರಾಷ್ಟ್ರಗಳೆಲ್ಲಾ ಅದರ ಹಿಂದೆ ಬರುವುವಾಗಿವೆ.

# ದಿ ಯುನೈಟೆಡ್ ಕರ್ನಾಟಕ ಇನ್ಶ್ಯೂರೆನ್ಸ ಕಂಪನಿ ಲಿಮಿಟೆಡ್.

## ಹೆಡ್ ಆಫೀಸ. ಧಾರವಾಡ

೧೯೩೮ ಇಸವಿಯ ವಿಮಾ ಕಾಯಿದೆಯ ಮೇರೆಗೆ ರಜಿಸ್ಟರ ಆಗಿದ್ದು ಈವರೆಗೆ ಸರಕಾರದ ಆಧಾರಪತ್ರಗಳಲ್ಲಿ ರೂ. ೧,೪೯,೬೦೦ಗಳನ್ನು ಪಾಲಿಸಿದಾರರ ಭದ್ರತೆಗಾಗಿ ಇಟ್ಟಿದೆ. ಕಂಪನಿಯ ಜೀವ ವಿಮಾನಿಧಿಯು ಸುಮಾರು ಒಂದು ಲಕ್ಷ ಹದಿನೈದು ಸಾವಿರ ರೂ ಗಳನ್ನು [illegible] ಪಾಲಿಸಿದಾರರ ಹಿತರಕ್ಷಣೆ ಪೂರ್ಣವಾಗಿದೆ. ಕರ್ನಾಟಕ ಬಂಡವಾಳ, ಕನ್ನಡಿಗರ ಆಡಳಿತ, ಕನ್ನಡನಾಡಿನ ಆರ್ಥಿಕ ಉನ್ನತಿಯನ್ನೇ ಕೋರುವ ಈ ಉತ್ತಮ ವಿಮಾಕಂಪನಿಯಲ್ಲಿ ಎಲ್ಲರೂ ಪಾಲಿಸಿ ಹಾಲುಗಳನ್ನು ಪಡೆಯಬೇಕು.

ಕರ್ನಾಟಕದ ಎಲ್ಲ ಜಿಲ್ಲೆಗಳಿಂದಲೂ ಏಜಂಟರಾಗ ಬಯಸುವವರು ಈ ಕೆಳಗಿನ ವಿಳಾಸಕ್ಕೆ ಪತ್ರವ್ಯವಹಾರ ಮಾಡಬೇಕು.

ಜಿ. ಆರ್. ನಲವಡಿ
B. A. LL. B. M. L. A
ಮ್ಯಾನೇಜಿಂಗ ಡಾಯರೆಕ್ಟರ.

ಎಮ್. ಗೋವರ್ಧನರಾವ
ಮ್ಯಾನೇಜರ.

ಮುಂಬೈ ಆರ್ಗನಾಯಜರರು:-

**ಮೆಸರ್ಸ ಇನಾಮತಿ ಕೊಣ್ಣೂರ ಮತ್ತು ಕಂಪನಿ**

10 Bismilla Building,
Opposite B. B. C. I. Ry. Station, Dadar.
DADAR, BOMBAY 14